## ಮುನ್ನುಡಿ

ವಿಜಯನಗರದ ಇತಿಹಾಸವು ನಾನು ವಿಶೇಷವಾಗಿ ಅಭ್ಯಾಸ ಮಾಡಿದ ತ್ರ. ನನ್ನ ಗುರುಗಳಾದ ಡಾ|| ಬಿ. ಎ. ಸಾಲೆತೂರರು ಈ ಬಗ್ಗೆ ಅಭ್ಯಾಸ ಾಡಿದ್ದರಷ್ಟೇ ಅತ ನನ್ನ ಪಿ. ಎಚ್. ಡಿ. ಅಧ್ಯಯನಕ್ಕೂ ವಿಜಯನಗರಕ್ಕೆ ಬಂಧಿಸಿದ ಒಂದು ಭಾಗ ನೀಡಿದ್ದರು. ಈ ಸಾಮ್ರಾಜ್ಯದ ಕುರಿತು ಮಾನ್ಯ ಓದುಗರಿಗೆ ತಿಳುವಳಿಕೆ ನೀಡಲೆಂದು ಈ ಕಿರು ಹೊತ್ತಿಗೆಯನ್ನು ರೆದಿದ್ದೇನೆ. ವಿಜಯನಗರದ ಕುರಿತಾದ 'ಕೃಷ್ಣದೇವರಾಯ' ಎಂಬ ದಂಬರಿಯನ್ನೂ 'ವಿಜಯನಗರದ ಕಥೆಗಳು' ಎಂಬ ಪುಸ್ತಕವನ್ನೂ ನಾನು ಗಾಗಲೇ ಪ್ರಕಟಿಸಿರುವೆ. ಇವಲ್ಲದೆ 'ಫಾರ್‌ಗಾಟನ್ ಎಂಪಯರ್' ಎಂಬ ಬರ್ಟ್ ಸ್ಯುಯಲ್ ಅವರು ಬರೆದ ಇಂಗ್ಲೀಷ್ ಪುಸ್ತಕವನ್ನು ನ್ಯಾಷನಲ್ ಕ್ ಟ್ರಸ್ಟ್‌ಗಾಗಿ ಭಾಷಾಂತರಿಸಿ ನೀಡಿದ್ದೇನೆ (1971) (ಮರೆತ ಾಮ್ರಾಜ್ಯ), ಅದು ಮುದ್ರಣವಾಗಿಲ್ಲ.

ಕರ್ನಾಟಕ ಸಾಜ್ಯೋತ್ಸವದ ದಿನ, ನಾಡಿಗೆ 'ಕರ್ನಾಟಕ' ಎಂದು ಧಿಕೃತವಾಗಿ ನಾಮಕರಣವಾದ ಪುಣ್ಯಪರ್ವದಲ್ಲಿ ಾಮ್ರಾಜ್ಯದ ರಾಜ್ಯ ಾನಿಯಾಗಿದ್ದ ಹಂಪೆಯಲ್ಲಿಯೇ ಈ ಕೃತಿ ಪ್ರಕಟವಾಗುತ್ತಿರುವುದು ನಿಜ ಾಗಿಯೂ ಸಂತಸ ನೀಡುವ ವಿಷಯ. ಏಕೆಂದರೆ ಇದು "ಕರ್ನಾಟಕ ರತ್ನ ಂಹಾಸನಾಧೀಶ್ವರ"ರ ಕತೆ.



## ಪುನರ್ಮುದ್ರಣಕ್ಕೆ ಮುನ್ನುಡಿ

1–11–1973ರಂದು ಬಿಡುಗಡೆಯಾದ ಈ ಕೃತಿ 12 ವರ್ಷಗಳ ತಂರ ಪುನರ್ಮುದ್ರಣವಾದಾಗ ಕೆಲವು ಪರಿಷ್ಕಾರಗಳನ್ನು ಮಾಡಿದ್ದೆ. 985ರ ನಂತರ, ಈಗ 1988ರಲ್ಲಿ ಈ ಹೊಸ ಆವೃತ್ತಿಯನ್ನು ಇನ್ನಷ್ಟು ಸ್ತರಿಸಿದೆ.

—ಲೇಖಕ

ನ್ನಡ
ತಳಿಕರ

# ೧ ಪ್ರಸ್ತಾವನೆ

ಕಾಲದಲ್ಲೇ

ಗತಕಾಲದ ಘಟನೆಗಳು ಮತ್ತು ಮಾನವನ ಸಾಧನೆಗ ಹೊಯ್ಸಳೇಶ್ವರ ಇತಿಹಾಸ. ಇತಿಹಾಸಪೂರ್ವ ಕಾಲದ-ಎಂದರೆ ಬರವಣಿಗೆ ವಾಂಕ ಕವಿಗಳು ಸಿಗುವ ಹಿಂದಿನ ಕಾಲಾವಧಿಯ-ಮಾನವನ ಸಾಧನೆಯ ಪಗೆ ಬಂದು ನೆಲೆ ಪ್ರದೇಶದಲ್ಲಿ ಅವನು ಬಿಟ್ಟು ಹೋದ ಅವಶೇಷಗಳಿಂದ ವ ತ್ರಿ, ತುಂಗ ಮೂಡುವುದು ಸಾಧ್ಯ. ಶಿಲೆಯಿಂದ ಮಾಡಿದ ಆಯುಧಗಳು, ಮಡಿಕೆ ನಗರ. ಮೂಳೆ ಮತ್ತು ಚಿಪ್ಪಿನ ಉಳಿಕೆಗಳು, ಅವನು ವಾಸವಾಗಿದ್ದ ಗುಹೆ ಅಥವಾ ಮನೆ ಕಟ್ಟಿಕೊಂಡ ನಿವೇಶನಗಳಲ್ಲಿ ಸಿಗುವ ಇತರ ವಸ್ತುಗಳಿಂದ ಅವನ ಜೀವನದ ವಿವರಗಳನ್ನು ಊಹಿಸಬಹುದಾಗಿದೆ. ಆದರೆ ಮೌರ್ಯರ ಕಾಲದ 10 ಶಾಸನಗಳು ಕರ್ನಾಟಕದಲ್ಲಿ ಸಿಕ್ಕಿವೆ. ಅವು ರಾಯಚೂರು, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ದೊರೆತಿದ್ದು, ಈ ಪ್ರದೇಶದವರಿಗೆ ಮೌರ್ಯರ ರಾಜ್ಯವಿತ್ತೆಂಬ ವಿವರ ತಿಳಿಯುತ್ತದೆ ಶಾತವಾಹನರ ಕಾಲದ ಕೆಲವು ಶಾಸನಗಳೂ ದೊರೆತಿವೆ. ಆಂಧ್ರ, ಮಹಾರಾಷ್ಟ್ರ ಹಾಗೂ ಕರ್ನಾಟಕದ ಪ್ರದೇಶಗಳಲ್ಲಿ ಕ್ರಿ.ಪೂ 30ರಿಂದ ಮೂರನೇಯ ಶತಮಾನದವರೆಗೆ ಅವರ ಆಳ್ವಿಕೆ ನಡೆಯಿತು. ನಾಸಿಕ, ಕನ್ಹೇರಿ, ಕಾರ್ಲೆಗಳಲ್ಲಿ ಅವರ ಸುಂದರ ಗುಹಾಲಯಗಳಿವೆ.

ಅನಂತರ ನಾಲ್ಕನೇಯ ಶತಮಾನದ ಮಧ್ಯ ಭಾಗದಿಂದ ಬನವಾಸಿಯಿಂದ ಕದಂಬರೂ ಕೋಲಾರದಿಂದ ಗಂಗರೂ ತಮ್ಮ ಆಳ್ವಿಕೆ ಆರಂಭಿಸಿದರು. ಬಹುಶಃ ಕರ್ನಾಟಕದ ಮೇಲೆ ಸಾಮ್ಯವನ್ನು ಹೊಂದಿದ್ದ ಪಲ್ಲವರನ್ನು ಪ್ರತಿಭಟಿಸಿ ಸ್ವತಂತ್ರ ರಾಜ್ಯ ಕಟ್ಟಿದ ಕದಂಬ ಮಯೂರ ಶರ್ಮನು ಬನವಾಸಿಯಲ್ಲಿ

ಸ್ಥಾಪಿಸಿದ ವಂಶವು ಆರನೇಯ ಶತಮಾನದ ಮಧ್ಯದವರೆಗೆ ಆಳಿತು. ಮುಂದೆ ಬಾದಾಮಿಯ ಚಾಳುಕ್ಯರು ಅವರನ್ನು ಪದಚ್ಯುತಗೊಳಿಸಿದರು. ಕದಂಬರ ಕಾಲದ ದೇವಾಲಯಗಳು ಬೆಳಗಾವಿ ಜಿಲ್ಲೆಯ ಹಲಸಿಯಲ್ಲಿವೆ. ಗೋವೆಯ ...ರ್ಲಿವೆಮ್ ಎಂಬಲ್ಲಿ ಇವರ ಕಾಲದ ವೈದಿಕ ಗುಹಾಲಯವಿದೆ.

ಕೋಲಾರ, ತಲಕಾಡು, ಶ್ರವಣಬೆಳಗೊಳಗಳಲ್ಲಿ ಸುಂದರ ದೇವಾಲಯ, ...ಾಗೂ ಶಿಲ್ಪಗಳನ್ನು ರಚಿಸಿರುವ ಗಂಗರು ಕ್ರಿಸ್ತಶಕ 4ನೇ ಶತಮಾನ ...ನೇಯ ಶತಮಾನದವರೆಗೆ, ಮೊದಲು ಸ್ವತಂತ್ರರಾಗಿ, ಮುಂದೆ ... ಚಾಳುಕ್ಯರ ಹಾಗೂ ಮಳಖೇಡದ ರಾಷ್ಟ್ರಕೂಟರ ಮಾಂಡಳಿಕ ... ಹತ್ತನೇಯ ಶತಮಾನದ ಕೊನೆಗೆ ಅವರ ರಾಜ್ಯವು ತಮಿಳು ...ಕೈ ಸೇರಿತು.

...ಯ ಚಾಳುಕ್ಯರು (ಕ್ರಿ ಶ. 550 ರಿಂದ 753) ಇಡೀ ...ವನ್ನು (ಇಮ್ಮಡಿಯ ಪುಲಿಕೇಶಿಯ ಕಾಲದಲ್ಲಿ) ಏಕಾಡಳಿತಕ್ಕೆ ಒಳ...ಸಿದರು. ಕದಂಬರು ಅವರ ಕೈಯಲ್ಲಿ ಸೋತು ಕಣ್ಮರೆಯಾದರೆ, ಗಂಗರು ಅವರ ಮಾಂಡಳಿಕರಾದರು. ಬಾದಾಮಿ, ಐಹೊಳೆ, ಪಟ್ಟದ ಕಲ್ಲುಗಳಲ್ಲಿ ಸುಂದರ ದೇವಾಲಯಗಳನ್ನು ರಚಿಸಿ ಕಲೆಯ ಕ್ಷೇತ್ರದಲ್ಲಿ ಉತ್ತಮ ಕೊಡುಗೆಯನ್ನು ಚಾಳುಕ್ಯರು ನೀಡಿದರು. ನರ್ಮದೆಯಿಂದ ಕಾವೇರಿಯವರೆಗಿನ ವಿಶಾಲವಾದ ಇವರ ರಾಜ್ಯಕ್ಕೆ ಮಳಖೇಡದ ರಾಷ್ಟ್ರಕೂಟರು 753ರಲ್ಲಿ ಉತ್ತ...ರಾಧಿಕಾರಿಗಳಾಗಿ ಕಾರ್ನಾಟಕದ ಕೀರ್ತಿ ಧ್ವಜವನ್ನು ಇನ್ನಷ್ಟು ಎತ್ತಿ ಹಿಡಿದರು. ಅಮೋಘ ವರ್ಷ (814–78) ಈ ವಂಶದ ಗಣ್ಯ ಖ್ಯಾತರಾಜ. ಈ ವಂಶದ ಒಂದನೇಯ ಕೃಷ್ಣನು ಎಲ್ಲೋರಾ (ಈಗ ಮಹಾರಾಷ್ಟ್ರದಲ್ಲಿದೆ) ಕೈಲಾಸ ದೇವಾಲಯವನ್ನು ಏಕ ಶಿಲೆಯಲ್ಲಿ ರಚಿಸಿ ಖ್ಯಾತನಾಗಿದ್ದಾನೆ.

ಕ್ರಿ ಶ. 973ರಲ್ಲಿ ಚಾಳುಕ್ಯರು ರಾಷ್ಟ್ರಕೂಟರನ್ನು ಪದಚ್ಯುತಗೊಳಿಸಿ ಮತ್ತೆ ಕರ್ನಾಟಕದ ಸ್ವಾಮಿಗಳಾದರು. ಕಲ್ಯಾಣ (ಬಿದರೆ ಜಿಲ್ಲೆಯ ಬಸವ ಕಲ್ಯಾಣ) ಇವರ ರಾಜಧಾನಿ. ಕೆಲಕಾಲ ಇವರೂ ರಾಜ್ಯ ಕಳೆದುಕೊಂಡ (1162) ಕಲಚೂರಿಗಳು ಕಾಲ್ಯಾಣದಿಂದ ಆಳಿದರು. ಈ ಕಲಚೂರಿ ವಂಶದ ಬಿಜ್ಜಳನ ಅಧಿಕಾರಿಗಳಾಗಿದ್ದವರು ಬಸವಣ್ಣನವರು. ಕಲಚೂರಿಗಳನ್ನು ಸೋಲಿಸಿ ಮತ್ತೆ ಚಾಳುಕ್ಯರು ಪ್ರಬಲಿಸಿದರು. 1189ರ ನಂತರ ಅವರ

ಆಳಲು ಸಾಧ್ಯ ಆಗಲಿಲ್ಲ. ಅವರ ಮಾಂಡಳಿಕರಾದ ದ್ವಾರ ಸಮುದ್ರ (ಹಳೇ ಬೀಡು)ದ ಹೊಯ್ಸಳರೂ ದೇವಗಿರಿ (ದೌಲತಾಬಾದ್)ಯ ಸೇಉಣ (ಯಾದವ)ರೂ ಪ್ರಬಲಿಸಿದರು. ಚಾಳುಕ್ಯರು ಇಟಗಿ, ಗದಗು, ಲಕ್ಕುಂಡಿ ಚೌಡದಾನಪುರ, ಕುರುವತ್ತಿಗಳಲ್ಲಿ ಸುಂದರ ದೇವಾಲಯ ರಚಿಸಿದರು. ಕನ್ನಡ ಸಂಸ್ಕೃತ ಸಾಹಿತ್ಯಗಳನ್ನು ಪ್ರೋತ್ಸಾಹಿಸಿದರು. ಆದರೆ ಮಾಂಡಳಿಕರ ಪ್ರಾಬಲ್ಯದಿಂದ ಮುಂದೆ ರಾಜ್ಯ ಕಳೆದುಕೊಂಡರು.

ಹಳೇಬೀಡಿನಿಂದ ಆಳಿದ ಹೊಯ್ಸಳ ವಿಷ್ಣುವರ್ಧನ ಕಾಲದಲ್ಲೇ ಬೇಲೂರು ದೇವಾಲಯದ ರಚನೆಯಾಯಿತು. ಹಳೇಬಿಡಿನ ಹೊಯ್ಸಳೇಶ್ವರ ದೇವಾಲಯದ ರಚನೆ ಆರಂಭವಾಯಿತು. ಹರಿಹರ, ರಾಘವಾಂಕ ಕವಿಗಳು ಹೊಯ್ಸಳರ ಕಾಲದಲ್ಲಿ ಇದ್ದವರು ಹರಿಹರ ಮುಂದೆ ಹಂಪೆಗೆ ಬಂದು ನೆಲೆ ನಿಂತ. ಹೊಯ್ಸಳರು ನಿರ್ನಾಮವಾಗುತ್ತಿದ್ದಾಗಲೇ ತಲೆಯೆತ್ತಿ, ತುಂಗ ಭದ್ರೆಯ ದಕ್ಷಿಣದ ಭಾರತದಲ್ಲಿ ನೆಲೆಯೂರಿದ ಸಾಮ್ರಾಜ್ಯ ವಿಜಯನಗರ.

ಉತ್ತರ ಭಾರತದಿಂದ ದಂಡೆತ್ತಿ ಬಂದ ದೆಹಲಿ ಸುಲ್ತಾನನ ಸೇನೆಯು. ದೇವಗಿರಿಯ ಯಾದವರು, ಓರಂಗಲ್ (ಆಂಧ್ರ)ನ ಕಾಕತೀಯರು, ಹಳೇ ಬೀಡಿನ ಹೊಯ್ಸಳರು ಹಾಗೂ ಮಧುರೆಯ ಪಾಂಡ್ಯರನ್ನು ಸೋಲಿಸಿದರು. ಪದೇ ಪದೇ ಈ ದಂಡಯಾತ್ರೆ ನಡೆಯಲು ಹೊಯ್ಸಳರ ವಿನಾ ಉಳಿದ ಮೂರು ರಾಜ್ಯಗಳು ಕಣ್ಮರೆಯಾದವು. ಹೊಯ್ಸಳರೂ ದುರ್ಬಲರಾದರು. ಪರಂಪರೆಗಳ ರಕ್ಷಣೆ, ವಿಕಾಶಗಳ ಕಾರ್ಯದಲ್ಲಿ ದಾಪುಗಾಲು ಹಾಕಿದ ಸಾಧನೆ ಹೊಸದಾಗಿ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯದ್ದು. ಧರ್ಮ, ಸಾಹಿತ್ಯ, ಲಲಿತಕಲೆ, ಸಂಸ್ಕೃತಿಗಳ ಕ್ಷೇತ್ರದಲ್ಲಿ ಅಮೂಲ್ಯ ಸಾಧನೆ ಮಾಡಿದ ಹೆಗ್ಗಳಿಕೆ ವಿಜಯನಗರದ ರಾಜರದ್ದು.

**ಇತಿಹಾಸದ ಸಾಧನೆಗಳು :** ವಿಜಯನಗರದ ಕಾಲಕ್ಕೆ ಬಂದಾಗ ದಕ್ಷಿಣ ಭಾರತದ ಇತಿಹಾಸ ರಚನೆಗೆ ಅಪಾರ ಸಾಧನ ಸಾಮಗ್ರಿ ದೊರಕುತ್ತವೆ. ಪುರಾತತ್ವ ಮೂಲಗಳು, ಪ್ರವಾಸಿಕರ ಕಥನಗಳು ಹಾಗೂ ಸಮಕಾಲೀನ ಸಾಹಿತ್ಯಗಳ ಅಪಾರ ರಾಶಿಯೇ ನಮಗೆ ಎದುರಾಗುತ್ತವೆ.

ಹಂಪೆ, ಚಂದ್ರಗಿರಿ, ಆನೆಗೊಂದಿ ಹಾಗೂ ದಕ್ಷಿಣ ಭಾರತದ ಇತರ ಕಡೆಗಳಲ್ಲಿ ನಮಗೆ ದೂರೆಯುವ ನಗರ ಕೋಟೆ, ಕಟ್ಟಡ, ದೇವಾಲಯ ಮುಂತಾದ ಅವೇಶಗಳು ನಮಗೆ ದೊರೆಯುವ ಮೊದಲ ಮೂಲಾಧಾರಗಳು. ವಿಜಯನಗರದ ದೊರೆಗಳ ಬಂಗಾರ. ಬೆಳ್ಳಿ, ಹಾಗೂ ತ್ರಾಮದ ಅಪಾರ ನಾಣ್ಯಗಳೂ ಉಪಲಬ್ಧವಿವೆ, ಇದಲ್ಲದೆ ಸುಮಾರು 7,000 ಶಾಸನಗಳು ನಮ್ಮ ಅವಗಾಹನಗೆ ಬಂದಿವೆ. ದಕ್ಷಿಣ ಭಾರತದಲ್ಲೆಲ್ಲ ಹರಡಿರುವ ಈ ಶಾಸನಗಳಲ್ಲಿ 400ಕ್ಕೂ ಹೆಚ್ಚು ತಾಮ್ರ ಶಾಸನಗಳು; ಉಳಿದವುಗಳ ಶಿಲಾ ಶಾಸನಗಳು. ಒಟ್ಟು ಶಾಸನಗಳಲ್ಲಿ ಅರ್ಧದಷ್ಟು ಕನ್ನಡ ಭಾಷೆಯಲ್ಲಿವೆ. 2,000 ರಷ್ಟು ತಮಿಳಿನಲ್ಲೂ 1,500 ರಷ್ಟು ತೆಲುಗಿನಲ್ಲೂ ಉಳಿದವು ಸಂಸ್ಕೃತದಲ್ಲೂ ಇವೆ. ಈ ಶಾಸನಗಳೇ ಇತಿಹಾಸರಚನೆಗೆ ಮುಖ್ಯ ಆಧಾರಗಳು.

ವಿದೇಶಿ ಪ್ರವಾಸಿಕರೂ ವಿಜಯನಗರದ ಬಗ್ಗೆ ಪೂರೈಸುವ ಮಾಹಿತಿ ಅಪಾರ ಈ ಪೈಕಿ ಪೋರ್ಚುಗೀಸ್ ಪ್ರವಾಸಿಗಳು ಅಗ್ರಗಣ್ಯರು. ಪಾಯಿಸ್ ಬರ್ಬೋಸಾ, ನುನಿಸ್ ಇಂಥವರಲ್ಲಿ ಪ್ರಮುಖರು. ನಿಕೊಲೊ ಕೊಂತಿ ಸೀಜರ್ ಪ್ರೆಡರಿಚ್ಚಿ ಇಟಲಿದೇಶದವರು. ಅಬ್ದುರ್‌ರಜಾಕ್ ಎಂಬಾತ ಪಾರಸಿಕ

ಇನ್ನು ಸಾಹಿತ್ಯಿಕ ಕೃತಿಗಳು : ಸಂಸ್ಕೃತದಲ್ಲಿರುವ "ಮಧುರಾವಿಜಯಂ" (ಲೇ–ಗಂಗಾದೇವಿ) "ವರಧಾಂಬಿಕಾ ಪರಿಣಯಂ" (–ತಿರುಮಲಾಂಬೆ) "ಸಾಳುವಾಭ್ಯದಯಂ" (–ರಾಜನಾಥ ಡಿಂಡಿವ11) "ರಾಮಾಭ್ಯುದಯಂ (–ರಾಜನಾಥ ಡಿಂಡಿಮ III) ಹಾಗೂ "ಶಿವತತ್ವರತ್ನಾಕರ"(–ಬಸವರಾಜ) ವಿಜಯನಗರವ ಬಗ್ಗೆ ವಿವರ ಪೂರೈಸುತ್ತವೆ.

ಕನ್ನಡದಲ್ಲಿ ವಿಜಯನಗರದ ಬಗೆಗಿನ ಚಾರಿತ್ರಿಕ ವಿವರಗಳನ್ನೊಳಗೊಂಡ ಕೃತಿಗಳು ಕಡಿಮೆ. "ವಿದ್ಯಾರಣ್ಯ ಕಾಲಜ್ಞಾನ," ತಿಮ್ಮಣ ಕವಿಯ ಭಾರತ ಪುರಂದರದಾಸರ ಕೃತಿಗಳು, ಲಿಂಗಣ್ಣನ "ಕೆಳದಿನೃಪವಿಜಯಂ" ಇಲ್ಲಿ ಉಲ್ಲೇಖನಾರ್ಹ ತೆಲುಗಿನಲ್ಲಿ ಮಾತ್ರ ಅಸಂಖ್ಯ ಕೃತಿಗಳು ವಿಜಯನಗರದ ಇತಿಹಾಸವನ್ನು ನೇರವಾಗಿ ತಿಳಿಸುತ್ತವೆ. ಶ್ರೀನಾಥ ಕವಿಯ "ಕಾಶಿಖಂಡ, ಮಲ್ಲಯ ಮತ್ತು ಸಿಂಗಯ ಬರೆದ "ವರಾಹಪುರಾಣ," "ಕೃಷ್ಣದೇವಾರಯನ "ಆಮುಕ್ತ ಮಾಲ್ಯದ", ಪೆದ್ದನನ "ಮನುಚರಿತಮು" ಧೂರ್ಜಟಿಯ "ಕೃಷ್ಣರಾಜ ವಿಜಯಮು," ನಾಂದಿಡ್ಲ ಗೋಪನ "ಕೃಷ್ಣಾರ್ಜುನಸಂವಾದಮು, "ನಂದಿ

ತಿಮ್ಮನನ "ಪಾರಿಜಾತಾಪಹರಣಮು," ಸ್ಥಾನಪತಿಯ "ರಾಯವಾಚಕಮು" ಇವೆಲ್ಲವೂ ಪ್ರಮುಖ ತೆಲುಗು ಮೂಲಗಳು.

ಬಹುಮನಿ ಸುಲ್ತಾನರ ಇತಿಹಾಸ ಹೇಳುವ ಪರ್ಶಿಯನ್ ಭಾಷೆಯ ಇತಿಹಾಸಕಾರರೂ ಇದ್ದಾರೆ. ಪರಿಶ್ತಾ, ಇಸ್ಸರಾಯಿನ್ (ಬಹುಮನ್‌ನಾಮಾ) ನಿಜಾಮುದ್ದಿನ್ ಅಹ್ಮದ್ (ತಬಾಕತ್ - ಇ - ಅಕ್ಬರಿ"), ತಬಾತಬಾ ("ಬುರಾನ್ - ಇ - ಮಾಸಿರ್"), ಅಮೀನ್ ಅಹ್ಮದ್ ರಾಜಿ ("ಹಫ್ತ್ ಇಕ್ಲಿಂ" ಮತ್ತು "ಹಾಜಿ-ಉದ್-ದಬೀರ್") ಇವರು ಈ ಮಾಲಿಕೆಯಲ್ಲಿ ಪ್ರಮುಖರು. ಮುಸಲ್ಮಾನರಾದ ಈ ಲೇಖಕರು ಸ್ವಧರ್ಮೀಯರಾದ ರಾಜರ ವಿಚಾರ ಹೇಳುವಾಗ ವಿಜಯನಗರದ ಕುರಿತು ತಪ್ಪು ಚಿತ್ರ ನೀಡಿದ್ದೇ ಹೆಚ್ಚು.

1901ರಲ್ಲಿ ರಾಬರ್ಟ್‌ಸುಯ್ಯೆಲ್ ಅವರ 'ಎ ಫೊರ್‌ಗಾಟನ್ ಎಂಪ ಯರ್' ಎಂಬ ಕೃತಿಯನ್ನು ಪ್ರಕಟಿಸುವವರೆಗೆ ವಿಜಯನಗರದ ಬಗ್ಗೆ ವಿಶೇಷ ಪರಿಜ್ಞಾನ ಇರಲಿಲ್ಲ ಮುಂದೆ ಬೆಂಗಳೂರು ಸೂರ್ಯನಾರಾಯಣರಾವ್ ಅವರು "ಎ ನೆವರ್-ಟು-ಬಿ ಫೊರ್‌ಗಾಟನ್ ಎಂಪಯರ್" ಬರೆದರು. ಡಾ॥ ಬಿ.ಎ. ಸಾಲೆತ್ತೂರರ "ಸೋಶಿಯಲ್ ಅಂಡ್ ಪೊಲಿಟಿಕಲ್ ಕಂಡಿಶನ್ಸ್ ವಿಜಯನಗರ ಎಂಪಯರ್" ಎಂಬ ಎರಡು ಖಂಡಗಳ ಬೃಹದ್ಗ್ರಂಥ ಪ್ರಕಟವಾಯಿತು. 1946ರಲ್ಲಿ ವಿಜಯನಗರದ ಸ್ಥಾಪನೆಯ ಷಟ್ ಶತಮಾನೋತ್ಸವ ನಡೆದಾಗ ಡಾ॥ ಪಾಂಡುರಂಗರಾವ್ ದೇಸಾಯಿಯವರ "ವಿಜಯನಗರ ಸಾಮ್ರಾಜ್ಯ" ಎಂಬ ಕನ್ನಡ ಗ್ರಂಥ ಬೆಳಕು ಕಂಡಿತು. "ವಿಜಯನಗರ ಸಿಕ್ಸೆ ಸೆಂಟೆನರಿ ಕಮಮೊರೇಶನ್ ವಾಲ್ಯುಂ" ಅದೇ ವರ್ಷ ಪ್ರಕಟವಾಯಿತು. ಫಾದರ್ ಹೆರಾಸರ "ಅರವಿಡು ಡಿನೆಸ್ಟಿ" ಕೊನೆಯ ರಾಜ ಮನೆತನದ ಇತಿಹಾಸವನ್ನು ನಿರೂಪಿಸಿತು. ವಿಜಯನಗರದ ಕುರಿತು ಈವರೆಗೆ ಪ್ರಕಟವಾದ ಗ್ರಂಥಗಳಲ್ಲಿ ಇವು ಪ್ರಮುಖವಾದವುಗಳು. ಎಂ. ಎಚ್. ರಾಮಶರ್ಮರ ಕೃತಿ ಇತ್ತೀಚೆಗೆ ಬಂದಿದೆ.

**ಕನ್ನಡಮೂಲ :** ವಿಜಯನಗರದ ಸ್ಥಾಪಕರು ಕನ್ನಡಿಗರೇ ತೆಲುಗರೇ ಎಂಬ ಬಗ್ಗೆ ಬೇಕಾದಷ್ಟು ವಾದವಿವಾದಗಳು ನಡೆದಿವೆ. ಎರಡನೆಯ ದೇವ ರಾಯನ ಆಸ್ಥಾನಿಕನಾದ ತೆಲುಗು ಕವಿ ಶ್ರೀನಾಥ ತನ್ನ ಸ್ವಾಮಿಯನ್ನು "ಕರ್ನಾಟಕ್ಷಿತಿನಾಥ" ಎಂದು ಕರೆದಿದ್ದಾನೆ. "ಭಾಷೆಗೆ ತಪ್ಪುವ ರಾಯರಗಂಡ" ಮುಂತಾದ ರಾಜರ ಕನ್ನಡ ಬಿರುದುಗಳು ವಿಜಯನಗರದ ಸಂಸ್ಕೃತ, ತೆಲುಗು

ಶಾಸನಗಳಲ್ಲಿ ಕಂಡುಬಂದಿವೆ. ವಿಜಯನಗರದ ದೊರೆಗಳು "ಶ್ರೀ ವಿರೂಪಾಕ್ಷ" ಎಂಬುದಾಗಿ ತಮ್ಮ ಸಂಸ್ಕೃತ ತಾಮ್ರ ಶಾಸನಗಳಲ್ಲೂ ಕನ್ನಡ ಲಿಪಿಯಲ್ಲಿ ಸಹಿ ಹಾಕಿದ್ದಾರೆ. ಕೃಷ್ಣದೇವರಾಯನು ತನ್ನ "ಆಮುಕ್ತ ಮಾಲ್ಯದ" ತೆಲುಗು ಕೃತಿಯಲ್ಲಿ ತನ್ನನ್ನು "ಕನ್ನಡರಾಯ" ಎಂದು ಕರೆದುಕೊಂಡಿದ್ದಾನೆ. ಪೆದ್ದನನು ತನ್ನ "ಮನುಚರಿತಮು" ಕಾವ್ಯದಲ್ಲಿ ಕೃಷ್ಣದೇವನನ್ನು "ಕನ್ನಡ ರಾಜ್ಯ ರಮಾರಮಣ" ಎಂದು ಕರೆದಿದ್ದಾನೆ. "ಭಾಷೆಗೆ ತಪ್ಪುವ ರಾಯರ ಗಂಡ"ಮುಂತಾದ ಅವರ ಕನ್ನಡ ಬಿರುದುಗಳು ಸಂಸ್ಕೃತ ಶಾಸನಗಳಲ್ಲೂ ಇವೆ. ವಿಜಯನಗರದ ದೊರೆಗಳ ಶಾಸನಗಳಲ್ಲಿ ಹೆಚ್ಚಿನವು ಕನ್ನಡ ಭಾಷೆಯಲ್ಲೇ ಇವೆ. ಆಂಧ್ರ, ತಮಿಳುನಾಡಿನಲ್ಲೂ ಕೂಡ ಅನೇಕ ಶಾಸನಗಳು ಕನ್ನಡ ಭಾಷೆಯಲ್ಲಿ ಅಥವಾ ಕನ್ನಡ ಲಿಪಿಯಲ್ಲಿ ಇವೆ. ಅನೇಕ ಬಾರಿ ನಾಗರಿಲಿಪಿಯಲ್ಲಿ ಮತ್ತು ಕನ್ನಡ ಭಾಷೆಯಲ್ಲಿ ಇರುವ ಶಾಸನಗಳೂ ಸಿಗುತ್ತವೆ. ಸಾಮ್ರಾಜ್ಯದಲ್ಲಿ ಕನ್ನಡಕ್ಕಿದ್ದ ಈ ಪ್ರಾಶಸ್ತ್ಯಕ್ಕೆ "ಕರ್ನಾಟಕದ ರತ್ನ ಸಿಂಹಾಸನ"ದಿಂದ ಆಳುತ್ತಿದ್ದ ವಿಜಯನಗರದ ದೊರೆಗಳು ಕನ್ನಡಿಗರಾಗಿದ್ದುದೇ ಕಾರಣ.

ಹೀಗಿದ್ದರೂ ಸಾಮ್ರಾಜ್ಯದ ಸ್ಥಾಪಕರಾದ ಹರಿಹರ ಮತ್ತು ಅವನ ಸೋದರರು ಓರಂಗಲ್, ಕಂಪಿಲಿಗಳಲ್ಲಿ ಅನುಕ್ರಮವಾಗಿ ಸೇವೆ ಸಲ್ಲಿಸುತ್ತಿದ್ದ ತೆಲುಗು ವ್ಯಕ್ತಿಗಳೆಂದು ವಾದಿಸಲಾಗುತ್ತದೆ. ಫಾದರ್ ಹೆರಾಸ್, ಡಾ|| ಸಾಲೆತೂರ್ ಹಾಗೂ ಇತ್ತೀಚೆಗೆ ಡಾ|| ಪಾಂಡುರಂಗರಾವ್ ದೇಸಾಯಿ ಮತ್ತು ಡಾ|| ಬಿ.ಆರ್. ಗೋಪಾಲ್ ಅವರು ಈ ವಾದವನ್ನು ಸಮರ್ಥವಾಗಿ ಅಲ್ಲಗಳೆದಿದ್ದಾರೆ. ನೆಲ್ಲೂರು ಜಿಲ್ಲೆಯ ಗೋಜಲವೀಡು ಎಂಬಲ್ಲಿ ದೊರೆತ ಬುಕ್ಕನ ಒಂದು ಶಾಸನ ಸಮ್ರಾಟ್ ಬುಕ್ಕನ "ಅಜ್ಜನಾದ ಬುಕ್ಕ" ಎಂಬುವನದೆಂದೂ ಆತ ಕಾಕತೀಯರ ಸಾಮಂತನೆಂದೂ ಪ್ರೊ. ಎನ್. ವೆಂಕಟರಮಣಯ್ಯ ಅವರು ವಾದಿಸಿದ್ದರು. ಆತ ಶಕವರ್ಷ 1236 ಆಳುತ್ತಿದ್ದನೆಂದು ಅವರು ತಿಳಿಸಿದ್ದರು. ಆದರೆ ಇತ್ತೀಚೆಗೆ ಈ ಶಾಸವನ್ನು ಪ್ರತಿ ಮಾಡಿ ಎಚ್ಚರದಿಂದ ಓದಿದಾಗ ಇದು ಶಕವರ್ಷ 1296ರ (ಕ್ರಿ.ಶ. 1374) ಶಾಸನ ಬುಕ್ಕನ "ಅಜ್ಜನ"ದಾಗಿರದೇ ಸಾಮ್ರಾಟ್ ಬುಕ್ಕನದೇ; ಅಲ್ಲಿರುವ ಬಿರುದುಗಳು ವಿಜಯನಗರ ಸಾಮ್ರಾಟರ ಬಿರುದುಗಳೇ, ಎಂಬುದು ಸ್ಪಷ್ಟವಾಯಿತು. ಈ ಶಾಸನವನ್ನು ತಪ್ಪಾಗಿ ಓದಿ ಫರಿಶ್ತಾನಂಥ ಪೂರ್ವಗ್ರಹಪೀಡಿತ ಇತಿಹಾಸ

ಮತ್ತು "ವಿದ್ಯಾರಣ್ಯ ಕಾಲಜ್ಞಾನ''ದಂಥ ಅನಂತರದ ಸಾಹಿತ್ಯ ಕೃತಿಗಳ ಆಧಾರವನ್ನು ನಂಬಿ ಹರಿಹರಾದಿಗಳ ತೆಲುಗು ಮೂಲದ ವಾದವನ್ನು ಮಂಡಿಸಲಾಗಿತ್ತು. ಆದರೆ ಯಾವುದೇ ಶಾಸನಗಳಲ್ಲಿ ಉಲ್ಲೇಖಿತವಾಗದ ಈ ವಾದದಲ್ಲಿ ಹುರುಳಿಲ್ಲ.

ಹರಿಹರ ಮತ್ತು ಅವನ ಸೋದರರು ಹೊಯ್ಸಳರ ಸೇನಾನಿಗಳಾಗಿದ್ದು ಮುಂದೆ ಸ್ವತಂತ್ರ ಸಾಮ್ರಾಜ್ಯ ಕಟ್ಟಿದರೆಂಬ "ಕನ್ನಡ ಮೂಲ"ದ ವಾದಕ್ಕೆ ಈಗ ಹೆಚ್ಚು ಪುಷ್ಟಿ ದೊರೆತಿದೆ ಫಾದರ್ ಹೆರಾಸ್ ಇದನ್ನು ಮೊದಲು ಪ್ರತಿಪಾದಿಸಿದವರಲ್ಲಿ ಪ್ರಮುಖರು.

'ತೆಲುಗು ಮೂಲ'ವಾದದ ಸಾರಾಂಶ ಹೀಗಿವೆ ಮೊದಲು ಓರಂಗಲ್, ಅನಂತರ ಕಂಪಿಲಿಯ ಆಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಹರಿಹರ ಬುಕ್ಕರು ಕಂಪಿಲಿ ಆಸ್ಥಾನ ವಾಸದ ನಂತರ ದೆಹಲಿಯ ಸೇನೆಯಿಂದ ಬಂಧಿತರಾಗಿ ದೆಹಲಿಗೆ ಒಯ್ಯಲ್ಪಟ್ಟರು. ಅವರನ್ನು ಮುಸಲ್ಮಾನ್ ಧರ್ಮಕ್ಕೆ ಮತಾಂತರಿಸಲಾಯಿತು. ದೆಹಲಿಯ ಸುಲ್ತಾನ ಅವರನ್ನು ದಕ್ಷಿಣದಲ್ಲಿ ತನ್ನ ದಳಪತಿಗಳಾಗಿ, ಮಂಡಲೀಶ್ವರರಾಗಿ ನೇಮಿಸಿದ. ಮುಂದೆ ವಿದ್ಯಾರಣ್ಯರ ಪ್ರೇರಣೆಯಿಂದ ಇಸ್ಲಾಂ ಅನ್ನು ತ್ಯಜಿಸಿ ಅವರು ಮತ್ತೆ ಹಿಂದೂಗಳಾದರು. ಸುಲ್ತಾನನ ವಿರುದ್ಧ ಬಂಡೆದ್ದು ಸ್ವತಂತ್ರ ಸಾಮ್ರಾಜ್ಯ ಕಟ್ಟಿದರು.

ಅವರು ಓರಂಗಲ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದರೆಂದು ಹೇಳಲು ಯಾವ ವಿಶ್ವಾಸಾರ್ಹ ಸಮಕಾಲೀನ ದಾಖಲೆಯೂ ಇಲ್ಲ. ಮುಸಲ್ಮಾನರಾಗಿದ್ದವರು ಮತ್ತೆ ಹಿಂದುಗಳಾದರೆಂಬ ಮಾತು, ಮಧ್ಯಯುಗದ ಆರಂಭ ಕಾಲದ ಕಟ್ಟುನಿಟ್ಟಿನ ಸಾಮಾಜಿಕ ನಿಯಮಗಳನ್ನು ಗಮನಿಸಿದಾಗ, ನಂಬಲರ್ಹವೆನಿಸದು. ಮುಸಲ್ಮಾನರಾಗಿದ್ದವರು ಹಿಂದೂ ಸಾಮ್ರಾಜ್ಯವನ್ನು ಕಟ್ಟುವುದಾಗಲೀ ಅಂಥವರಿಗೆ ಸುಲಭವಾಗಿ ಜನಬೆಂಬಲ ದೊರೆಕಿತೆನ್ನುವುದಾಗಲೀ ಊಹೆಗೆ ನಿಲುಕದ ವಿಷಯಗಳು.

ಹರಿಹರ, ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಈ ಪಂಚ ಸಹೋದರರು ಸಂಗಮ ಎಂಬ ವ್ಯಕ್ತಿಯ ಮಕ್ಕಳು. ಹೀಗಾಗಿ ವಿಜಯನಗರದ ಮೊದಲ ರಾಜಮನೆತನವನ್ನು ಸಂಗಮ ವಂಶ ವೆನ್ನುಲಾಗುತ್ತದೆ. ಹರಿಹರ ಬುಕರು ಹೊಯ್ಸಳ ಸೇನಾನಿಗಳು, ಹೊಯ್ಸಳ ಸಾಮ್ರಾಜ್ಯ ಉತ್ತರದಲ್ಲಿ

ಅಧಿಕಾರದಲ್ಲಿದ್ದವರು ಎಂಬ ವಿಚಾರ ನಂಬಲು ಸಾಕಷ್ಟು ಕಾರಣಗಳಿವೆ. ಹರಿ
ಹರನ ಪ್ರಮುಖ ದಂಡನಾಯಕರಲ್ಲಿ ಒಬ್ಬನಾದ ಬಲ್ಲಪ್ಪನು ಆರಂಭದಲ್ಲಿ
ಹೊಯ್ಸಳ ವೀರಬಲ್ಲಾಳನ ದಂಡಾಧಿಪನಾಗಿದ್ದ. ಆತನ ತಾಯಿ ಹೊಯ್ಸಳ
ರಾಜಕುಮಾರಿಯಾಗಿದ್ದಳು. ಆತನ ತಂದೆ ಸೋಮದಂಡ ನಾಯಕ ಮೂರ
ನೇಯ ಬಲ್ಲಾಳನ ಸೋದರಿಯ ಪತಿ. ಬಲ್ಲಪ್ಪ ಸಂಗಮ ವಂಶದ ರಾಜ
ಕುಮಾರಿ (ಹರಿಹರನ ಮಗಳು) ಯೊಬ್ಬಳನ್ನು ವರಿಸಿದ್ದ. ಈ ವಿಚಾರಗಳ
ಹರಿಹರ ಮೊದಲು ಹೊಯ್ಸಳರಿಗೆ ನಿಕಟನಾಗಿದ್ದನೆಂಬ ವಿಷಯಕ್ಕೆ ಸಮರ್ಥನೆ
ನೀಡುತ್ತವೆಂದು ಡಾ|| ದೇಸಾಯಿ ವಾದಿಸಿದ್ದಾರೆ 1346ರ ಶೃಂಗೇರಿ ಶಾಸನ
ದಲ್ಲಿ ಹರಿಹರಾದಿಗಳು ಶೃಂಗೇರಿ ಸ್ವಾಮಿಗಳಿಗೆ ನೀಡಿದ ದಾನಕ್ಕೆ ಪೂರಕವಾಗಿ
ಹೊಯ್ಸಳ ಮೂರನೇಯ ಬಲ್ಲಾಳನ ರಾಣಿ ಕೃಷ್ಣಾಯಿ (ಚಿಕ್ಕಾಯಿ) ತಾಯಿ
ಒಂದು ದಾನ ನೀಡಿರುವುದನ್ನು ಇಲ್ಲಿ ಗಮನಿಸಬಹುದು.

# ೨ ರಾಜಕೀಯ ಇತಿಹಾಸ

**ರಾಜ್ಯಸ್ಥಾಪನೆ :** ಹೊಯ್ಸಳ ಸಾಮ್ರಾಜ್ಯ ದುರ್ಬಲವಾಗುತ್ತ ನಡೆದಾಗ ಸಂಗಮ ಪುತ್ರರು ಸ್ವತಂತ್ರ ರಾಜ್ಯ ಕಟ್ಟುವ ಯೋಜನೆ ಹಾಕಿರಬೇಕು. ಅವರ ರಾಜ್ಯಸ್ಥಾಪನೆ 1336ರಲ್ಲಿ ಆಯಿತೆಂದು ನಂಬಲಾಗುತ್ತದೆ. ಈ ರಾಜ್ಯ ಸ್ಥಾಪನಾ ಕಾರ್ಯದಲ್ಲಿ ವಿದ್ಯಾರಣ್ಯರು ಅವರಿಗೆ ನೆರವು ನೀಡಿದರೆಂದೂ ಅವರ ನೆನಪಿಗಾಗಿ ಹೊಸ ರಾಜಧಾನಿಗೆ 'ವಿದ್ಯಾನಗರ' ಎಂದು ಹೆಸರಿಡಲಾಯಿತೆಂದೂ ಹೇಳಲಾಗುತ್ತದೆ. ವಿದ್ಯಾರಣ್ಯರು ಆಗ ಶೃಂಗೇರಿಯ ಪೀಠಾಧಿಪತಿಗಳಾಗಿದ್ದರೆಂದು ನಂಬುಗೆ.

ಆದರೆ ವಿಜಯನಗರದ ಸ್ಥಾಪನೆಯ ಕಾಲಕ್ಕೆ ವಿದ್ಯಾರಣ್ಯರು ಶೃಂಗೇರಿ ಪೀಠದ ಅಧಿಕಾರಿಗಳಾಗಿರಲಿಲ್ಲ. ಶೃಂಗೇರಿಯ ಆಗಣ ಸ್ವಾಮಿಗಳು ವಿದ್ಯಾತೀರ್ಥರು. ವಿದ್ಯಾರಣ್ಯರು ಪೀಠಾರೋಹಣ ಮಾಡಿದ್ದು ಸು.1373ರ ನಂತರ. 1346 ಶೃಂಗೇರಿ ಶಾಸನದಲ್ಲಿ ಹರಿಹರಾದಿ ಸಂಗಮ ಸಹೋದರರು ಶೃಂಗೇರಿಗೆ ಭೇಟಿ ನೀಡಿದ್ದ ಉಲ್ಲೇಖವಿದ್ದು ಆಗಿನ ಪೀಠಾಧಿಕಾರಿಗಳು ವಿದ್ಯಾತೀರ್ಥರೆಂದು ಹೇಳಿದೆ. ಈ ಶಾಸನದಲ್ಲಿ ವಿದ್ಯಾರಣ್ಯರ ಉಲ್ಲೇಖವಿಲ್ಲ 1356ರ ಒಂದು ದಾಖಲೆಯಂತೆ ಈ ವರ್ಷ ವಿದ್ಯಾರಣ್ಯರು ಕಾಶಿಯಲ್ಲಿ ಶಿಕ್ಷಣ ಮಗ್ನರಾಗಿದ್ದರೆಂದು ತಿಳಿಯುತ್ತದೆ. ಹೀಗಾಗಿ ವಿಜಯನಗರದ ಸ್ಥಾಪನೆಯಲ್ಲಿ ವಿದ್ಯಾರಣ್ಯರ ಸ್ಪಷ್ಟ ಪಾತ್ರವೇನೆಂದು ತಿಳಿಯುವುದು ಕಷ್ಟ. ಶೃಂಗೇರಿಯ ಪೀಠಾರೋಹಣ ಮಾಡುವ ಮೊದಲು ಮತ್ತು ತಾವು ಕಾಶಿಗೆ ಹೋಗುವುದಕ್ಕೂ ಮೊದಲು ವಿದ್ಯಾರಣ್ಯರು ವಿಜಯನಗರದಲ್ಲಿ ಇದ್ದರೆಂದು ತಿಳಿಸಲು ಯಾವ ಖಚಿತಾಧಾರವೂ ಇಲ್ಲ.

ಆದರೆ ಶೃಂಗೇರಿ ಪೀಠಾಧಿಪತಿಗಳು ವಿಜಯನಗರದ ಸ್ಥಾಪನೆಯ ಕಾರ್ಯದಲ್ಲಿ ಒಂದಲ್ಲ ಒಂದು ವಿಧದಿಂದ ನೆರವಾಗಿದ್ದರೆಂಬುದು ಸ್ಪಷ್ಟ.

ವಿದ್ಯಾರಣ್ಯರು ಸ್ವರ್ಣವೃಷ್ಟಿ ಮಾಡಿಸಿದರೆಂಬ ಐತಿಹ್ಯಕ್ಕೆ ಹರಿಹರಾದಿಗಳಿಗೆ ಅವರು ಧನಸಹಾಯ ಮಾಡಿರಬಹುದೆಂದು ಅರ್ಥ ಹೇಳಬಹುದಾಗಿದೆ. 1346 ರಿಂದ ಆರಂಭಿಸಿ ಶೃಂಗೇರಿ ಮಠಕ್ಕೆ ವಿಜಯನಗರ ದೊರೆಗಳು ಸತತವಾಗಿ ಗೌರವ ಸಲ್ಲಿಸುತ್ತ ಬಂದರು. ಆರಂಭದಲ್ಲಿ ರಾಜಧಾನಿಗಳಿಗೆ ಇಟ್ಟ ಹೆಸರಾದ 'ವಿದ್ಯಾನಗರ, ಬಹುಶಃ ವಿದ್ಯಾತೀರ್ಥರ ಸ್ಮರಣೆಗಾಗಿ ಇಟ್ಟ ಹೆಸರೇ ಆಗಿರಬೇಕು, ಮುಂದೆ ಪೀಠದ ಸ್ವಾಮಿಗಳಾದ ವಿದ್ಯಾರಣ್ಯರು ವಿಜಯನಗರದ ಜೊತೆ ನಿಕಟ ಸಂಬಂಧವಿರಿಸಿಕೊಂಡಿದ್ದು ವೇದಭಾಷ್ಯ ರಚನಾದಿ ಕಾರ್ಯಗಳಲ್ಲಿ ಅವರ ಸೋದರ ಸಾಯಣಾಚಾರ್ಯರ ಸಹಕಾರದಿಂದ ಅನೋಘ ಕಾರ್ಯಮಾಡಿದರು.

ಹರಿಹರ ಮತ್ತು ಬುಕ್ಕರು ತಮ್ಮನ್ನು "ಮಹಾ ಮಂಡಲೇಶ್ವರ" ಎಂದಷ್ಟೇ ಕರೆದುಕೊಂಡಿದ್ದರು. ಆದರೆ ಎರಡನೆಯ ಹರಿಹರನು "ರಾಜಾಧಿರಾಜ" ಎಂಬ ಸಾಮ್ರಾಟರಿಗೆ ಯೋಗ್ಯವಾದ ಬಿರುದು ತಳೆದ ಮೊದಲ ದೊರೆ.

ಹರಿಹರ (1336–56) : ಹರಿಹರನ ರಾಜ್ಯಭಾರ 1336 ರಿಂದಲೇ ಆರಂಭವಾಯಿತೆಂದು ಸೂಚಿಸುವ ಮೊದಲ ದಾಖಲೆಯೆಂದರೆ ಆ ವರ್ಷ ಪಶ್ಚಿಮ ಕರಾವಳಿಯ ಬಾರಕೂರಿನಲ್ಲಿ ಆತ ಕೋಟೆಯನ್ನು ಕಟ್ಟಿದನೆಂಬ ಮೊದಲ ಉಲ್ಲೇಖ. ಮುಂದೆ 1339ರ ಒಂದು ಶಾಸನದಂತೆ (ಇದು ಕರ್ನೂಲು ಜಿಲ್ಲೆಯದು) ಆತ ಗುತ್ತಿಯಿಂದ ಆಳುತ್ತಿದ್ದ. 1340ರ ಕನಿಷ್ಠ ಮೂರು ಶಾಸನಗಳಿವೆ. ಆ ವರ್ಷ ಆತನ ಆಜ್ಞೆಯಂತೆ ಬಾದಾಮಿಯಲ್ಲಿ ಕೋಟೆಯನ್ನು ಕಟ್ಟಿಸಲಾಯಿತೆಂದು ಹೇಳಿದೆ. ಇಬ್ನ್ ಬತುತ ಎಂಬ ಟಂಜಿರ್‌ನ ಪ್ರವಾಸಿಯ ಹೇಳಿಕೆಯಂತೆ ಹೊನ್ನಾವರದಲ್ಲಿ ಇದ್ದ ಒಬ್ಬ ಮುಸ್ಲಿಂ ಅಧಿಕಾರಿಗೆ 'ಹರಿಯಬ್' (ಹರಿಯಪ್ಪ) ಎಂಬ ಒಬ್ಬ ಸ್ವಾಮಿ ಇದ್ದ. (ಹರಿಯಪ್ಪ ಹರಿಯಪ್ಪೊಡೆಯ, ಎಂದು ಹರಿಹರನನ್ನು ಶಾಸನಗಳಲ್ಲಿ ಸಂಬೋಧಿಸಿದೆ.) ಕರ್ನಾಟಕ, ಆಂಧ್ರ, ಪ್ರಾಂತಗಳ ಉತ್ತರ ಭಾಗಗಳ ಮೇಲೆ ಹರಿಹರನ ರಾಜ್ಯ ನೆಲೆಗೊಂಡಿತ್ತು. ಆವನ ಸೋದರ ಬುಕ್ಕ ಹರಿಹರನ ಜೊತೆ ಕೂಡು ದೊರೆಯಾಗಿದ್ದ. 1345ರಿಂದಲೇ ಬುಕ್ಕನು ಹರಿಹರನ ಜೊತೆ ರಾಜ್ಯಾಡಳಿತದಲ್ಲಿ ಪಾಲುಗಾರನಾಗಿದ್ದನೆಂದು ಸೂಚಿಸುವ ಶಾಸನವಿದೆ.

ಹೊಯ್ಸಳ ವೀರಬಲ್ಲಾಳನು 1343 ರಲ್ಲೂ ಆವನ ಮಗನಾ

ವಿರೂಪಾಕ್ಷ ಬಲ್ಲಾಳನು 1345ರಲ್ಲೂ ತೀರಿಕೊಂಡುದರಿಂದ ವಿಜಯನಗರದ ಪರಮಾಧಿಕಾರಕ್ಕೆ ಯಾವ ಅಡೆತಡೆಯೂ ಇರಲಿಲ್ಲ. ಹೊಸದಾಗಿ ತಾನು ಗೆದ್ದ ರಾಜ್ಯದಲ್ಲಿ ವ್ಯವಸ್ಥಿತವಾದ ಆಡಳಿತವನ್ನು ಹರಿಹರ ನೆಲೆಗೊಳಿಸಿದ. ದಕ್ಷಿಣ ಆಂಧ್ರ, ತಮಿಳುನಾಡುಗಳಲ್ಲಿನ ಕೆಲವು ಸಣ್ಣಪುಟ್ಟ ರಾಜ್ಯಗಳನ್ನೂ ಮಧುರೆಯಲ್ಲಿನ ಮುಸ್ಲಿಂ ರಾಜ್ಯವೊಂದನ್ನೂ ನಾಮಾವಶೇಷ ಗೊಳಿಸಬೇಕೆಂಬ ಸಿದ್ಧತೆಯಲ್ಲಿದ್ದಾಗಲೇ 1347ರಲ್ಲಿ ಕುಲ್ಬುರ್ಗಿಯಲ್ಲಿ ಬಾಹಮನಿ ಸುಲ್ತಾನರ ಅಸ್ತಿತ್ವಕ್ಕೆ ಬಂತು. ತನ್ನ ಉತ್ತರ ಗಡಿಗಳ ರಕ್ಷಣೆಗೆ ಗಮನ ನೀಡ ಬೇಕಾಗಿ ಬಂದುದರಿಂದ ಹರಿಹರ ದಕ್ಷಿಣವನ್ನು ಕಡೆಗಣಿಸಬೇಕಾಗಿ ಬಂತು.

ಹರಿಹರ ಶೂರನೂ ದೂರದೃಷ್ಟಿಯುವನೂ ಆದ ಒಬ್ಬ ಸಮರ್ಥ ದೊರೆ. "ಪೂರ್ವ ಪಶ್ಚಿಮ ಸಮುದ್ರಾಪತಿ", "ಅರಿರಾಯ ವಿಭಾಡ", "ಭಾಷೆಗೆ ತಪ್ಪುವ ರಾಯರ ಗಂಡ" ಎಂಬುದಾಗಿ ಶಾಸನಗಳು ಅವನ ಬಿರುದುಗಳನ್ನು ಉಗ್ಗಡಿಸಿವೆ. ಪುತ್ರ ಸಂತಾನವಿಲ್ಲದ ಹರಿಹರ ತನ್ನ ಜೀವಿತ ಕಾಲದಲ್ಲಿ ಕೂಡುದೊರೆಯಾಗಿ ಸ್ವೀಕರಿಸಿದ್ದ (1356ರಲ್ಲಿ ಹರಿಹರ ತೀರಿಕೊಂಡಾಗ) ಬುಕ್ಕನಿಗೆ ಪಟ್ಟವಾಯಿತು.

**ಬುಕ್ಕರಾಯ** (1356-77): ಬುಕ್ಕನ ಕಾಲದಲ್ಲಿ ತುಂಗಭದ್ರೆಯಿಂದ ಕನ್ಯಾಕುಮಾರಿಯವರೆಗಿನ ದಕ್ಷಿಣ ಭಾರತದ ಬಹುಭಾಗವೆಲ್ಲ ವಿಜಯನಗರದ ವಶವಾಯಿತು. ಆರ್ಕಾಟು ಜಿಲ್ಲೆಯ ಪ್ರದೇಶದಲ್ಲಿ ಆಳುತ್ತಿದ್ದ ಶಂಭುವರಾಯ ಮತ್ತು ಅವನ ಮಗನನ್ನು ಕೊಂದು 1360ರ ಸುಮಾರಿಗೆ ತಮಿಳುನಾಡಿನ ಆ ಭಾಗವನ್ನು ಆತ ಗೆದ್ದುಕೊಂಡ. ಕೊಂಡವೀಡಿನ ರೆಡ್ಡಿಗಳನ್ನು ಸೋಲಿಸಿ ಪೆನುಗೊಂಡ ಮತ್ತು ಸುತ್ತಲ ಪ್ರದೇಶಗಳನ್ನು ಸಾಮ್ರಾಜ್ಯಕ್ಕೆ ಸೇರಿಸಿದ. 1370ರ ಸುಮಾರಿಗೆ ಮಧುರೆಯ ಸುಲ್ತಾನನನ್ನು ಸೋಲಿಸಿ ಮಧುರೆಯ ಹಾಗೂ ಸುತ್ತಲ ನೆಲವನ್ನು ಗೆದ್ದುಕೊಂಡ. ಪರಕೀಯರ ಕಿರುಕುಳದಿಂದ ಸ್ಥಾನಭ್ರಷ್ಟನಾಗಿದ್ದ ಶ್ರೀರಂಗನಾಥಸ್ವಾಮಿಯನ್ನು ಶ್ರೀರಂಗನಾಥ ದೇವಾಲಯ ದಲ್ಲಿ ಪ್ರತಿಷ್ಠಾಪಿಸಿ ಪೂಜೆಪುರಸ್ಕಾರಗಳನ್ನು ಆರಂಭಿಸಲಾಯಿತು. ಬುಕ್ಕನ ಕುಮಾರ ಕಂಪಣನು ಈ ವಿಜಯವನ್ನು ಸಾಧಿಸಿದ್ದ. ಗಂಗಾಬಿಕೆ ತನ್ನ "ಮಧುರಾವಿಜಯಂ" ಕಾವ್ಯದಲ್ಲಿ ಈ ದಂಡಯಾತ್ರೆಯನ್ನು ಬಣ್ಣಿಸಿದ್ದಾಳೆ.

ತುಂಗಭದ್ರಾ ಮತ್ತು ಕೃಷ್ಣಾ ನದಿಗಳ ನಡುವಣ ದೋಆಬ್ ಪ್ರದೇಶ ಕ್ಕಾಗಿ ಬಾಹಮನಿಯವರಿಗೂ ವಿಜಯನಗರಕ್ಕೂ ಅನೇಕ ಬಾರಿ ಯುದ್ಧ ವಾಯಿತು. ಈ ಯುದ್ಧದಲ್ಲಿ ವಿಜಯನಗರ ಸೋತಿತು, ಅಪಾರ ಜನ ಹಾನಿ ಒಳಗಾಯಿತು ಎಂದು ಫರಿಶ್ತಾ ಹೇಳಿದ್ದರೂ ದೋಆಬ್‌ನ ಅನೇಕ ಪ್ರದೇ ಗಳು ಹಾಗೂ ಗೋವೆಯ ಮೇಲೆ ಬುಕ್ಕರಾಯ ಪಡೆದಿದ್ದ ಅಧಿಕಾರವನ್ ಗಮನಿಸಿದರೆ ಫರಿಶ್ತಾನ ಹೇಳಿಕೆ ಅತಿರಂಜಿತವೆಂದು ತೋರುತ್ತದೆ. "ಬುಕ್ಕನ ತನ್ನ ಶತ್ರುಗಳ ವಿರುದ್ಧ ಮೇಲ್ಮೈ ಸಾಧಿಸಿದ್ದನೆಂಬುದು ಸ್ಪಷ್ಟ" ಎಂದು ಕುರಿತು ಪ್ರೊ. ಎನ್. ವೆಂಕಟರಮಣಯ್ಯ ಹೇಳಿದ್ದಾರೆ

"ಗೋವಾ ಬಂದರು, ಮಲಗಾವ್ (ಬೆಳಗಾವ್?) ಕೋಟೆ.......... ಬಿಜ್ನಗರ್ ರಾಯನಿಗೆ ಸೇರಿದ್ದವು....ಮಲಬಾರ್, ಸಿಂಹಳ ಹಾಗೂ ಇತ ದ್ವೀಪಗಳ ರಾಯರು ಈತನ ಆಸ್ಥಾನದಲ್ಲಿ ರಾಯಭಾರಿಗಳನ್ನಿಟ್ಟು ಪ್ರತಿವರ್ ಅಮೂಲ್ಯವಾದ ಕಾಣಿಕೆಗಳನ್ನು ಕಳುಹಿಸುತ್ತಿದ್ದರು" ಎಂದು ಫರಿಶ್ತಾ ತಿಳಿ ದ್ದಾನೆ. ಚೀನಾ ದೇಶದ ಮಿಂಗ್ ವಂಶದ ಸಾಮ್ರಾಟನ ಆಸ್ಥಾನಕ್ಕೆ ಬು ರಾಯ ರಾಯಭಾರಿಯನ್ನು ಕಳುಹಿಸಿದ್ದನೆಂದು ಆ ದೇಶದ 1374ರ ಒಂ ದಾಖಲೆ ಹೇಳುತ್ತದೆ.

ವಿದ್ಯಾರಣ್ಯ (ಮಾಧವ)–ಸಾಯಣರ ನೇತೃತ್ವದಲ್ಲಿ ವೇದಗಳ ಭಾ ಲೇಖನದ ಬೃಹತ್ಕಾರ್ಯ ಬುಕ್ಕನ ಕಾಲದಲ್ಲಿ ಆರಂಭವಾಯಿತು. "ವೇ ಮಾರ್ಗ ಪ್ರತಿಷ್ಠಾಪಕ", "ವೈದಿಕ ಮಾರ್ಗ ಪ್ರವರ್ತಕ" ಎಂಬ ಬಿರು ಗಳನ್ನು ಬುಕ್ಕರಾಯ ಧರಿಸಿದ್ದ. ತೆಲುಗು ಕವಿ ಸೋಮನನು ಬುಕ್ ಆಶ್ರಯದಲ್ಲಿ "ಉತ್ತರ ಹರಿವಂಶಮು" ಕಾವ್ಯ ರಚಿಸಿದ.

ಹೊಯ್ಸಳರ ಕಾಲದಲ್ಲಿ ಪ್ರಬಲರಾದ ಶ್ರೀವೈಷ್ಣವರು ಜೈನರ ಹಿಂಸಿಸಲು ಆರಂಭಿಸಿದುದನ್ನು ತಡೆಯಲು ಬುಕ್ಕರಾಯನು ಉಭಯ ಸಂ ದಾಯಗಳಲ್ಲಿ ಒಮ್ಮತ ಸಾಧಿಸಲು ಕ್ರಮ ಕೈಗೊಂಡನೆಂದು ಶ್ರವಣಬೆಳಗೊ ಕಲ್ಯ ಹಾಗೂ ಇತರ ಕಡೆಗಳಲ್ಲಿ ಸ್ಥಾಪಿಸಿದ ಶಾಸನಗಳಿಂದ ಗೊತ್ತಾಗುತ್ತ

**ಎರಡನೆಯ ಹರಿಹರ** (1377–1404): ಬುಕ್ಕನ ಸಮರ್ಥ ಪ ನಾದ ಕಂಪಣನು ತಂದೆಗಿಂತ ಮೊದಲೇ ತೀರಿಕೊಂಡುದರಿಂದ ಕಂಪ

ಸಹೋದರ ಹರಿಹರ ತನ್ನ ತಂದೆಯ ನಂತರ ಪಟ್ಟವೇರಿದ. ಹರಿಹರನ ಕಾಲದಲ್ಲಿ ಸಾಮ್ರಾಜ್ಯ ಸಕಲದೆಸೆಯಲ್ಲೂ ವಿಸ್ತರಿಸಿತು.

1378ರಲ್ಲಿ ಬಾಹಮನಿಯ ಸುಲ್ತಾನ ಮುಜಾಹಿದ್ ತೀರಿಕೊಂಡ ಕಾಲದಲ್ಲಿ ಹರಿಹರ ತನ್ನ ರಾಜ್ಯವನ್ನು ಗೋವೆಯಿಂದ ಉತ್ತರಕ್ಕೆ ಚಾವುಲ್, ದಾಬೋಳ್ ಮತ್ತು ಖಾರೆಪಟನ್‌ಗಳನ್ನೊಳಗೊಂಡ ಕೊಂಕಣ ಕರಾವಳಿಗೆ ವಿಸ್ತರಿಸಿದ. ಆಂಧ್ರದಲ್ಲಿ ನಡೆಯುತ್ತಿದ್ದ ರೆಡ್ಡಿ ಹಾಗೂ ವೆಳಮ ದ್ವಂದ್ವದ ಲಾಭ ಪಡೆದು ಉದಯಗಿರಿ ಕೋಟೆಯನ್ನು ಗೆದ್ದುಕೊಂಡ. ವೆಳಮ ದೊರೆ ಬಾಹಮನಿಗಳ ನೆರವನ್ನು ಪಡೆದಿದ್ದರೂ ಅದನ್ನು ಗಮನಿಸದೆ ಉಭಯರ ಸೇನೆಯನ್ನೂ ಸೋಲಿಸಿ ಕೃಷ್ಣೆಯ ಉತ್ತರದ ಪಾಂಗಳ ಕೋಟೆಯನ್ನು 1898 ರಷ್ಟೊತ್ತಿಗೆ ವಶಪಡಿಸಿಕೊಂಡನೆನ್ನಲು ಶಾಸನಾಧಾರವಿದೆ. ಈ ಯುದ್ಧದಲ್ಲಿ ಸುಲ್ತಾನನಿಗೇ ಜಯವಾಯಿತೆಂದೇ ಫರಿಶ್ತಾ ತಿಳಿಸುತ್ತಾನೆ. ಆದರೆ ಉಭಯ ರಾಜ್ಯಗಳ ಗಡಿ ಹಿಂದಿದ್ದಂತೆಯೇ ಇರಬೇಕೆಂದು ಒಪ್ಪಂದವಾಯಿತೆಂದು ಅವನೇ ಹೇಳುವ ಮಾತಿನಿಂದ ಮೇಲಣ ಹೇಳಿಕೆ ಸುಳ್ಳೆನ್ನಲು ಮೇಲಣ ಶಾಸನದ ಜೊತೆ ಇನ್ನೊಂದು ಆಧಾರ ಸಿಗುತ್ತದೆ.

ಎರಡನೆಯ ಹರಿಹರನ ಕಾಲದಲ್ಲಿ ವಿದ್ಯಾರಣ್ಯರು ಶೃಂಗೇರಿಯ ಪೀಠಾಧಿಕಾರಿಗಳಾಗಿದ್ದರು (1380–86) ಅವರು ಮತ್ತು ಅವರ ಸೋದರರ ನೇತೃತ್ವದಲ್ಲಿ ನಡೆದ ವೇದಗಳ ಭಾಷ್ಯಲೇಖನ ಈ ಕಾಲದಲ್ಲಿ ಪೂರ್ತಿಯಾಯಿತು. "ವೈದಿಕಮಾರ್ಗ ಸ್ಥಾಪನಾಚಾರ್ಯ" ಎಂಬುದು ಹರಿಹರನ ಬಿರಿದು. ವಿಶಾಲ ಸಾಮ್ರಾಜ್ಯವನ್ನು ಹೊಂದಿದ್ದ ಹರಿಹರ "ರಾಜಾದಿರಾಜ" ಎಂಬ ಬಿರುದು ಧರಿಸಿದ್ದ. ತನ್ನ ಸಾಮ್ರಾಜ್ಯದ 26 ಪ್ರಮುಖ ನಗರಗಳಲ್ಲಿ ಸಂತೆಗಳನ್ನು ವ್ಯವಸ್ಥೆಗೊಳಿಸಿದ. ಮುದ್ದೆಯ ದಂಡನಾಯಕನನ್ನು "ಪೃಥ್ವೀಶೆಟ್ಟಿ" ಯಾಗಿ ನೇಮಿಸಿ ಈ ಸಂತೆಗಳಿಂದ ಸುಂಕ ಸಂಗ್ರಹಿಸುವ ಅಧಿಕಾರವನ್ನು ಆತನಿಗೆ ಹರಿಹರನು ನೀಡಿದನೆಂದು 1382ರ ಬೇಲೂರು ಶಾಸನ ಹೇಳುತ್ತದೆ. ವಿಜಯನಗರದ ದೊರೆಗಳ ಸರ್ವಧರ್ಮ ಸಮನ್ವಯ ನೀತಿಯನ್ನು ಎತ್ತಿ ಹಿಡಿಯುವ "ಯಂಶೈವಾ ಸಮುಪಾಸತೆ ಶಿವ ಇತಿ—" ಎಂದು ಚೆನ್ನಕೇಶವನನ್ನು ಸ್ತುತಿಸುವ ಶ್ಲೋಕವಿರುವುದು ಈ ಶಾಸನದಲ್ಲೇ.

**ದೇವರಾಯ** (1406–22) **:** ಹರಿಹರನ ಕಾಲದಲ್ಲಿ ಸಾಮ್ರಾಜ್ಯದ

ಬೇರೆ ಬೇರೆ ಮಂಡಲಗಳ ಮಂಡಲೇಶ್ವರರಾಗಿದ್ದ ಅವನ ಪುತ್ರರಲ್ಲಿ ಪಟ್ಟಕ್ಕಾಗಿ ಅಂತಃಕಲಹವಾಯಿತು. ತಂದೆಯ ಮರಣಾನಂತರ ವಿರೂಪಾಕ್ಷನು ಪಟ್ಟ ವೇರಿದ ಕೆಲವೇ ತಿಂಗಳುಗಳಲ್ಲಿ ಈತನನ್ನು ಪಕ್ಕಕ್ಕೆ ತಳ್ಳಿ ಎರಡನೇ ಬುಕ್ಕ ಸಾಮ್ರಾಟನಾದ. ಮುಂದೆ ಸುಮಾರು ಎರಡು ವರ್ಷಕಾಲ ಆಳಿದ ಎರಡನೆಯ ಬುಕ್ಕ ತನ್ನ ಸೋದರ ದೇವರಾಯನಿಗೆ ಸಿಂಹಾಸನವನ್ನು ತೆರವು ಮಾಡಿದ. (ಬಹುಶಃ ಬುಕ್ಕ ತೀರಿಕೊಂಡ.)

ದೇವರಾಯನ ಕಾಲದಲ್ಲಿ ಸಾಮ್ರಾಜ್ಯವು ಪೂರ್ವದೆಸೆಯಲ್ಲಿ ಉತ್ತರ ಮುಖವಾಗಿ ಬೆಳೆಯಿತು. ಗೋದಾವರಿ ಮುಖಜ ಭೂಮಿಯವರೆಗಿನ ಆಂಧ್ರ ಪ್ರಾಂತವೆಲ್ಲ ಅವನ ಕೈಗೆ ಬಂದು ಕಳಿಂಗದ (ಒರಿಸ್ಸಾ) ಗಜಪತಿಗಳ ಜೊತೆ ವಿಜಯನಗರದ ಪಾರಂಪರಿಕ ದ್ವಂದ್ವಕ್ಕೆ ನಾಂದಿಯಾಯಿತು.

ಫರಿಶ್ತಾನ ಹೇಳಿಕೆಯಂತೆ ದೇವರಾಯನು ಮುದಗಲ್‌ನ ಅಕ್ಕಸಾಲಿಗರ ಕನ್ನೆಯೊಬ್ಬಳನ್ನು ಮೋಹಿಸಿ ವರಿಸಲು ಇಚ್ಛಿಸಿದ; ಇದರಿಂದ ಆತನಿಗೂ ಬಾಹುಮನಿ ಸುಲ್ತಾನನಿಗೂ ಯುದ್ಧವಾಯಿತು. ಯುದ್ಧದಲ್ಲಿ ದೇವರಾಯನಿಗೆ ಭಾರಿ ಸೋಲಾಯಿತು. ದೇವರಾಯ ತನ್ನ ಮಗಳನ್ನು ಬಾಹಮನಿಯ ರಾಜಕುಮಾರನಿಗೆ ಮದುವೆ ಮಾಡಿಕೊಟ್ಟು ಶಾಂತಿ ಮಾಡಿಕೊಳ್ಳಬೇಕಾಯಿತು. ಫರಿಶ್ತಾನ ಈ ಹೇಳಿಕೆಗಳನ್ನೆಲ್ಲ ಕಟ್ಟು ಕತೆಗಳೆಂದೇ ಹೇಳಬೇಕು. ಸಮಕಾಲೀನ ಮುಸ್ಲಿಂ ಲೇಖಕರಾಗಲೀ ಶಾಸನಗಳಾಗಲೀ ಬಾಹಮನಿ ಸುಲ್ತಾನನ ವಿಜಯ ಅಥವಾ ದೇವರಾಯನು ತನ್ನ ಮಗಳನ್ನು ಬಾಹಮನಿ ಮನೆತನಕ್ಕೆ ನೀಡಿದನೆಂಬ ಕತೆಯನ್ನು ಸಮರ್ಥಿಸಿಲ್ಲ. (ನಿಜಾಮುದ್ದೀನ್ ಸುಲ್ತಾನನಿಗೆ ಗೆಲುವಾಯಿತೆಂದು ತಿಳಿಸಿದ್ದರೂ ವಿವಾಹ ಸಂಬಂಧದ ವಿಚಾರ ಪ್ರಸ್ತಾಪಿಸಿಲ್ಲ: ಶಬಾತಬಾ ಇಂಥಾ ಬಾರಿ ವಿಜಯದ ವಿಚಾರವನ್ನೇನೂ ಹೇಳುವುದಿಲ್ಲ). ಈ ಅಕ್ಕಸಾಲಿಗರ ಮಗಳ ಕತೆಗೆ ಸಮಾನವಾದ ಕಟ್ಟುಕತೆಯೊಂದು ರಜಪೂತರ ಇತಿಹಾಸಕ್ಕೆ ಸಂಬಂಧಿಸಿಯೂ ಮುಸಲ್ಮಾನ್ ಲೇಖಕ ಎಂದ ಹೇಳಲ್ಪಟ್ಟಿದೆಯೆಂದೂ ಆ ಎರಡು ಕಥೆಗಳೂ ಸುಳ್ಳೆಂದು ಪ್ರೊ. ಜೆ. ೧. ಹೆಚ್. ಖರೆ ತೋರಿಸಿಕೊಟ್ಟಿದ್ದಾರೆ

ತನ್ನ ಸೇನೆಯಲ್ಲಿ ಪ್ರಬಲ ಅಶ್ವದಳವಿರುವಂತೆ ದೇವರಾಯ ವಿಶೇಷ ಯತ್ನ ಮಾಡಿದ. ತುರುಕ ಧನುರ್ವಿದ್ಯಾನಿಪುಣ ಸೈನಿಕರನ್ನು ಆತನು ತನ್ನ

ಸೇನೆಯಲ್ಲಿ ಸೇರಿಸಿಕೊಂಡನು. ಪಾಂಗಳವನ್ನು ಗೆಲ್ಲಬೇಕೆಂದು ಬಾಹಮನಿಯ ಫಿರೋಜ್ ಷಾ ನಡೆಸಿದ ಯತ್ನವನ್ನು ಆತ ವಿಫಲಗೊಳಿಸಿದ. ಈ ಪರಾಜಯದಿಂದ ದುಃಖತೃಪ್ತನಾದ ಫಿರೋಜ್‌ಷಾ ರಾಜ್ಯಭಾರದಲ್ಲಿ ಆಸ್ಥೆ ಕಳೆದುಕೊಂಡ.

ನಿಕೋಲೋ ಕೊಂತಿ ಎಂಬ ಇಟಲಿಯ ಪ್ರವಾಸಿ 1420-21ರಲ್ಲಿ ವಿಜಯನಗರಕ್ಕೆ ಬಂದಿದ್ದು ಆತ ವಿಜಯನಗರದ ಬಗ್ಗೆ ಸ್ವಾರಸ್ಯದ ವರ್ಣನೆ ನೀಡಿದ್ದಾನೆ. ರಾಜಧಾನಿಯು 60 ಮೈಲಿ ಸುತ್ತಳತೆಯುಳ್ಳದ್ದಾಗಿದೆಯೆಂದು ಆತನು ತಿಳಿಸಿದ್ದಾನೆ.

ಮಾಧವ-ಸಾಯಣರ ಸೋದರಳಿಯ ಲಕ್ಷ್ಮೀಧರನೆಂಬಾತ ದೇವರಾಯನ ವಿಶ್ವಸಪಾತ್ರ ಮಂತ್ರಿಯಾಗಿದ್ದು. ಜೈನಕವಿ ಮಧುರ (ಕನ್ನಡ "ಧರ್ಮನಾಥ ಪುರಾಣ"ದ ಲೇಖಕ) ಲಕ್ಷ್ಮೀಧರನಿಂದ ಪ್ರೋತ್ಸಾಹಿತನಾದವನು.

**ವಿಜಯರಾಯ** (1422-24) : ದೇವರಾಯನ ನಂತರ ಕೆಲಕಾಲ ಅವನ ಪುತ್ರ ರಾಮಚಂದ್ರ ರಾಜ್ಯಭಾರ ಮಾಡಿದ (1422).

ಆದರೆ ಮುಂದೆ ವಿಜಯರಾಯನೆಂಬ ರಾಮಚಂದ್ರನ ಸೋದರನದೇ ಮೇಲ್ಗೈಯಾಯಿತು. ವಿಜಯರಾಯನ ಆಳ್ವಿಕೆಯ ಕಾಲದಲ್ಲಿ ಅವನ ಮಗ ಎರಡನೇಯ ದೇವರಾಯನು ರಾಜ್ಯಭಾರದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದು ಮುಂದೆ ಆತನೇ ರಾಜನಾದ. ಪ್ರೊ. ಎನ್. ವೆಂಕಟರಮಣಯ್ಯನವರ ಅಭಿಪ್ರಾಯದಂತೆ ವೀರವಿಜಯನು 1430 ರವರೆಗೆ ಜೀವಿಸಿದ್ದರೂ 1424 ರಿಂದ ಎರಡನೆಯ ದೇವರಾಯನೇ ರಾಜ್ಯಭಾರ ನಡೆಸಲಾರಂಭಿಸಿದ.

ವಿಜಯರಾಯನ ಕಾಲದಲ್ಲಿ ಬಾಹಮನಿಗಳಿಗೂ ವಿಜಯನಗರಕ್ಕೂ ನಡೆದ ಯುದ್ಧದಲ್ಲಿ ವಿಜಯನಗರಕ್ಕೆ ಸೋಲಾಯಿತೆಂದು ಫರಿಶ್ತಾ ಹೇಳಿರುವನಾದರೂ ಬಾಹಮನಿಯವರ ರಾಜಧಾನಿಯನ್ನು ಇದೇ ಕಾಲಕ್ಕೆ ಕಲ್ಬುರ್ಗಿಯಿಂದ ಉತ್ತರದ ಬೀದರ್‌ಗೆ ಬದಲಾಯಿಸಿದ್ದೂ ದೇವರಾಯನಶಾಸನವೊಂದರಲ್ಲಿ ತುರುಷ್ಕರನ್ನು ಆತ ಸೋಲಿಸಿದನೆಂದು ತಿಳಿಸಿರುವುದೂ ಗಮನಾರ್ಹ ವಿಷಯಗಳು. ಈ ಯುದ್ಧ 1424ರಲ್ಲಿ ನಡೆದಿರಬೇಕು. (ಅದೇ ವರ್ಷ ರಾಜಧಾನಿಯನ್ನು ಬೀದರ್‌ಗೆ ಬದಲಾಯಿಸಲಾಯಿತು.)

**ಪ್ರೌಢ (ಎರಡನೇಯ) ದೇವರಾಯ (1422-46):** "ಗಜಬೇಂಟೆಕಾರ"ಎಂಬ ಬಿರುದು ಧರಿಸಿದ ಪ್ರೌಢದೇವರಾಯ ಸಂಗಮ ವಂಶದಲ್ಲೇ ಶ್ರೇಷ್ಠನಾದ ದೊರೆ. ದೇವರಾಯನ ಕಾಲದಲ್ಲಿ ಕಳಿಂಗದೊಡನೆ ಮೂರು ಬಾರಿ ಯುದ್ಧವಾಯಿತು. 1427ರಲ್ಲಿ ಗಜಪತಿ ಭಾನುದೇವಕೊಂಡ ವೀಡನ್ನು ಗೆದ್ದುಕೊಂಡ. ಆತನನ್ನು ಅಲ್ಲಿಂದ ಹೊಡೆದಟ್ಟಲಾಯಿತು. 1436ರಲ್ಲಿ ರಾಜಮಹೇಂದ್ರವರಂವನ್ನು ಗೆದ್ದುಕೊಳ್ಳಲು ಗಜಪತಿ ಕಪಿಲೇಂದ್ರನು ನಡೆಸಿದ ಯತ್ನವೂ ವಿಫಲವಾಯಿತು. ಐದಾರು ವರ್ಷಗಳಾದ ನಂತರ ಮತ್ತೊಮ್ಮೆ ವಿಜಯನಗರದ ಭಾಗಗಳ ಮೇಲೆ ನಡೆಸಿದ ದಾಳಿಯನ್ನೂ ಹಿಂದೊತ್ತಲಾಯಿತು.

1435-36ರಲ್ಲಿ ದೇವರಾಯನಿಗೂ ಬಾಹಮನಿಯ ಅಲ್ಲಾ ಉದ್ದೀನನಿಗೂ ನಡೆದ ಯುದ್ಧದಲ್ಲಿ ದೇವರಾಯನು ಮುದಗಲ್ ಕೋಟೆಯನ್ನು ಕಳೆದುಕೊಂಡನೆಂದು ಮುಸ್ಲಿಂ ಇತಿಹಾಸಕಾರರು ತಿಳಿಸಿರುವರು. ಆದರೆ ಮುದಗಲ್ ಕೋಟೆಯಲ್ಲಿನ 1436ರ ಒಂದು ಶಾಸನದಿಂದ ಅದು ವಿಜಯನಗರದ ವಶದಲ್ಲೇ ಇತ್ತೆಂದು ಸ್ಪಷ್ಟವಾಗುವುದೆಂದು ಡಾ॥ ದೇಸಾಯಿ ಹೇಳಿದ್ದಾರೆ. 1443ರಲ್ಲಿ ನಡೆದ ಇನ್ನೊಂದು ಯುದ್ಧದಲ್ಲಿ ವಿಜಯನಗರಕ್ಕೆ ಸೋಲಾಯಿತೆಂದು ಫರಿಶ್ತಾ ತಿಳಿಸಿದ್ದಾನೆ. ಕೃಷ್ಣಾ-ತುಂಗಭದ್ರಾ ದೋಅಬ್‌ನಲ್ಲಿನ ಕೆಲವು ಪ್ರದೇಶಗಳನ್ನು ಈ ಕಾಲದಲ್ಲಿ ವಿಜಯನಗರವು ಕಳೆದುಕೊಂಡಂತೆ ಕಾಣುತ್ತದೆ. ರಾಜಧಾನಿಯಲ್ಲಿ ಈ ಕಾಲದಲ್ಲಿ ಕೆಲವು ಗೊಂದಲಗಳು ನಡೆದಿದ್ದವು. ದೇವರಾಯನನ್ನು ಕೊಲೆಗೈಯಲು ಅವನ ಸೋದರನೊಬ್ಬಾತ ಯತ್ನಿಸಿದ. ದೇವರಾಯ ಗಾಯಗೊಂಡು ಪಾರಾಗಿದ್ದ. ಈ ಗೊಂದಲದ ಸ್ಥಿತಿಯೇ ವಿಜಯನಗರದ ಪರಾಜಯಕ್ಕೆ ಕಾರಣ. ಆದರೆ ಇದರಿಂದ ಸಾಮ್ರಾಜ್ಯಕ್ಕೆ ಭಾರಿ ಹಾನಿಯೇನೂ ಆದಂತಿಲ್ಲ

ದೇವರಾಯನ ಕಾಲದಲ್ಲಿ ಕೇರಳದ ದಕ್ಷಿಣ ಭಾಗ (ಕೊಯಿಲೊನ್)ವು ಸಾಮ್ರಾಜ್ಯಕ್ಕೆ ಸೇರಿಸಲ್ಪಟ್ಟಿತು. ಆತನ ದಂಡನಾಯಕ ಲಕ್ಕಣನು ನೌಕಾದಳವೊಂದರ ನೆರವಿನಿಂದ ಸಿಂಹಳದ ಮೇಲೆ ದಂಡೆತ್ತಿ ನಡೆದು ಹೇರಳ ಕಪ್ಪ ಸಂಗ್ರಹಿಸಿ ಮರಳಿದ. ಕಲ್ಲಿಕೋಟೆಯ ಜಾಮೊರಿನನೂ ದೇವರಾಯನ ಬಗ್ಗೆ ಭಯ, ಗೌರವ ಇರಿಸಿದನೆಂದು ಅಬ್ದುಲ್ ರಜಾಕ್ ಹೇಳಿದಾನೆ. ಬರ್ಮದ

ಕೆಲವು ದೊರೆಗಳಿಂದಲೂ (ಪೆಗು, ತೆನಸ್ಸರಿಂ) ದೇವಾರಾಯನು ಕಪ್ಪ ಸಂಗ್ರಹಿಸುತ್ತಿದ್ದನೆಂದು ನುನಿಸ್ ತಿಳಿಸಿದ್ದಾನೆ.

ಅಬ್ದುಲ್ ರಜಾಕ್ ಎಂಬ ಪಾರಸಿಕ ಪ್ರವಾಸಿ 1443ರಲ್ಲಿ ವಿಜಯನಗರಕ್ಕೆ ಬಂದಿದ್ದು, ಆತ ದೇವರಾಯನ ಆಳ್ವಿಕೆಯ ವೈಭವವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾನೆ. "ಬಿದ್ ನಗರ ಪಟ್ಟಣವು ಎಂತಹದ್ದೆಂದರೆ ನೇತ್ರಪಟಲವು ಅಂಥ ಸ್ಥಳವನ್ನು ಎಂದೂ ನೋಡಿಲ್ಲ. ಇದಕ್ಕೆ ಸಮಾನವಾದುದು ಜಗತ್ತಿನಲ್ಲಿ ಇನ್ನೊಂದುಇದೆಯೆಂಬ ವಾರ್ತೆಯನ್ನು ಸುದ್ದಿ ಸಂಗ್ರಹಿಸುವ ಕಿವಿ ಕೇಳಿಲ್ಲ" ಎನ್ನುವ ಆತ ರಾಜಧಾನಿಯು ಏಳು ಕೋಟೆಗಳಿಂದ ಆವೃತವಾಗಿದೆಯೆಂದು ತಿಳಿಸಿದ್ದಾನೆ. ದೇವರಾಯನನ್ನು ಆತ ಬಹಳವಾಗಿ ಹೊಗಳಿದ್ದಾನೆ.

ಪರಾಕ್ರಮಿಯೂ ಪಂಡಿತನೂ ಆದ ದೇವರಾಯ ವಿದ್ಯಾಪಕ್ಷಪಾತಿಯಾಗಿದ್ದ. ಮಹಾನಾಟಕ ಸುಧಾನಿಧಿ" ಎಂಬ ಸಂಸ್ಕೃತ ಕೃತಿಯನ್ನು ಆತ ಬರೆದಿದ್ದಾನೆ. ಡಿಂಡಿಮ ವಂಶದ ಗುಂಡ ಅವನ ಆಸ್ಥಾನದ ಇನ್ನೊಬ್ಬ ಸಂಸ್ಕೃತ ಕವಿ. ತೆಲುಗು ಕವಿ ಶ್ರೀನಾಥನಿಗೆ ದೇವರಾಯ ಕನಕಾಭಿಷೇಕ ಮಾಡಿಸಿದ್ದ.

ದೇವರಾಯನ ಕಾಲ ವೀರಶೈವ ಸಂಪ್ರದಾಯ ಹಾಗೂ ಸಾಹಿತ್ಯಗಳ ಪುನರುಜ್ಜೀವನ ಕಾಲ. ಅವನ ದಂಡನಾಯಕರಾದ ಲಕ್ಕಣ ಮತ್ತು ಜಕ್ಕಣ್ಣರು ವೀರಶೈವ ಕವಿಗಳು. ನೂರು ಒಂದು ವಚನಕಾರರು ದೇವರಾಯನ ಕಾಲದಲ್ಲಿ ಇದ್ದರೆಂದು ಪ್ರತೀತಿ. ಶ್ರೇಷ್ಠ ವಿರಶೈವ ಕವಿ ಚಾಮರಸ (ಕೃತಿ "ಪ್ರಭುಲಿಂಗ ಲೀಲೆ") ದೇವರಾಯನ ಸಮಕಾಲೀನನೆಂದು ನಂಬಿಕೆ.

ಹಂಪೆ ಹಜಾರ ರಾಮಸ್ವಾಮಿಯ ದೇವಾಲಯವನ್ನು ದೇವರಾಯನೇ ಆರಂಭಿಸಿದ ಅಲ್ಲಿನ ಒಂದು ಶಾಸನ ಆತನನ್ನು ಭೋಜರಾಜನಿಗೆ ಹೋಲಿಸಿದೆ.

ದೇವರಾಯನಂಥ ತೇಜಸ್ವಿ ದೊರೆಯ ಆಳ್ವಿಕೆಯ ನಂತರ 'ದಿನದ ನಂತರ ರಾತ್ರೆ, ಎನ್ನುವಂತೆ, ವಿಜಯನಗರ ಸಾಮ್ರಾಜ್ಯ ಕೆಲಕಾಲ ಕುಂದುತ್ತ ನಡೆಯಿತು. ಮುಂದಿನ ನಾಲ್ಕು ದಶಕದಲ್ಲಿ ಸಾಮ್ರಾಜ್ಯದ ಗಾತ್ರ ಸಣ್ಣದಾಯಿತು. ಅಸಮರ್ಥ ಸುಖಲೋಲುಪ ದೊರೆಗಳ ಆಡಳಿತವೇ ಇದಕ್ಕೆ ಕಾರಣ.

ಮಲ್ಲಿಕಾರ್ಜುನ (1446-65) : 1446ರಲ್ಲಿ ದೇವರಾಯ ತೀರಿಕೊಂಡಾಗ ಅವನ ಪುತ್ರ ಮಲ್ಲಿಕಾರ್ಜುನನಿಗೆ ಪಟ್ಟವಾಯಿತು. ಆದರೆ ದೇವರಾಯನ ಸೋದರ ಪ್ರತಾಪದೇವರಾಯ ಅಥವಾ ಎರಡನೇಯ ವಿಜಯರಾಯ ಪಟ್ಟಕ್ಕಾಗಿ ಸ್ಪರ್ಧೆ ನಡೆಸಿದ. 1146-47ರ ಅನೇಕ ಶಾಸನಗಳು ಈತನ ಆಳ್ವಿಕೆಯನ್ನು ಸೂಚಿಸುತ್ತವೆ. ಆದರೆ ಅಂತಿಮವಾಗಿ ಮಲ್ಲಿಕಾರ್ಜುನನದೇ ಮೇಲ್ಗೈಯಾಯಿತು, ಈತನನ್ನು ಮೂರನೇಯ ದೇವರಾಯ ಎಂದೂ ಕರೆಯಲಾಗಿದೆ.

1450ರಲ್ಲಿ ಬಾಹಮನಿ ಸುಲ್ತಾನನ ಸೇನೆ ರಾಜಧಾನಿ ವಿಜಯನಗರದವರೆಗೆ ದಂಡೆತ್ತಿ ಬಂತು. ಈ ಆಕ್ರಮಣವನ್ನು ಹಿಂದಕ್ಕಟ್ಟಿದರೂ ಪೂರ್ವಭಾಗದಲ್ಲಿ ಗಜಪತಿ ನಡೆಸಿದ ದಾಳಿ ಸಾಮ್ರಾಜ್ಯಕ್ಕೆ ಹೆಚ್ಚು ಘಾತಕವೆನಿಸಿತು. 1454 ರಷ್ಟೊತ್ತಿಗೆ ರಾಜಮಹೇಂದ್ರವರಂ ಸಾಮ್ರಾಜದ ಕೈ ತಪ್ಪಿತು. 1468ರಲ್ಲಿ ಉದಯಗಿರಿ, ಕೊಂಡವೀಡುಗಳೂ, ಗಜಪತಿಯ ವಂಶವಾದವು. ಧೀರ್ಘಕಾಲ ಈ ದುರ್ಗವು ಕೋಟೆಗಳು ಗಜಪತಿಯ ಕೈಯಲ್ಲೇಉಳಿಯುವಂತಾಯಿತು. ಈ ಪರಾಜಯದಿಂದ ಪ್ರತಿಷ್ಠೆ ಕಳೆದುಕೊಂಡ ಮಲ್ಲಿಕಾರ್ಜುನನನ್ನು ಬದಿಗೊತ್ತಿ ಅವನ ಚಿಕ್ಕಪ್ಪ (ಪ್ರತಾಪದೇವರಾಯ : ಎರಡನೇಯ ದೇವರಾಯನ ಸೋದರ) ನ ಮಗ ವಿರೂಪಾಕ್ಷ ಪಟ್ಟವೇರಿದ. ವಿರೂಪಕ್ಷಮಲ್ಲಿಕಾರ್ಜುನನನ್ನು ಕೊಲೆಮಾಡಿದನೆಂಬ ಹೇಳಿಕೆಗಳಿದ್ದರೂ ಸಿಂಹಾಸನಭ್ರಷ್ಟನಾದ ನಂತರವೂ ಮಲ್ಲಿಕಾರ್ಜುನನು ಬದುಕಿದ್ದನೆನ್ನಲು ಸಾಕಷ್ಟು ಆಧಾರಗಳಿವೆ.

ವಿರೂಪಾಕ್ಷ (1565-85) : ಕುಂದುತ್ತಿರುವ ತನ್ನ ಸಾಮ್ರಾಜ್ಯದ ಶಕ್ತಿಯನ್ನು ಹೆಚ್ಚಿಸಲು ವಿರೂಪಾಕ್ಷನು ಸಮರ್ಥನಾಗಲಿಲ್ಲ. ಸುಖಲೋಲುಪನೂ ವ್ಯಸನಿಯೂ ಆದ ವಿರೂಪಾಕ್ಷನನ್ನು 1485ರಲ್ಲಿ ಅವನ ಮಗನೇ ಕೊಲೆಗೈದ ಪಿತೃಹಂತಕನಾದ ಈತ ತಾನು ಪಟ್ಟವೇರದೆ ತನ್ನ ಕಿರಿಯ ಸೋದರ ಪ್ರತಾಪ ಮಹಾರಾಯ ಅಥವಾ ಪೌಢರಾಯನಿಗೆ ಪಟ್ಟ ಕಟ್ಟಿಸಿದ. ಈತನೂ ಅಸಮರ್ಥ ದೊರೆಯೇ ಆಗಿದ್ದ.

1485 ರಲ್ಲಿ ಸಾಮ್ರಾಜ್ಯದ ಹಿರಿಯ ಸೇನಾನಿ ಸಾಳುವ ನರಸಿಂಹ ರಾಜ್ಯಾಧಿಕಾರವನ್ನು ಕೈಗೆ ತೆಗೆದುಕೊಂಡು ಮೆಲ್ಲಮೆಲ್ಲನೆ ಸಂಗಮವಂಶದ, ದೊರೆಯನ್ನು ಬದಿಗೊತ್ತಿದ.

# ೩. ಸಾಳುವರು-ತುಳುವರು

**ಸಾಳುವ ನರಸಿಂಹ** (1485-91) : ಒಡೆದು ಚೂರಾಗಿ ಹೋಗುವ ದುಸ್ಥಿತಿಯಿಂದ ಸಾಮ್ರಾಜ್ಯನೌಕೆಯನ್ನು ರಕ್ಷಿಸಿದ ಕೀರ್ತಿ ಸಾಳುವ ನರಸಿಂಹ ನಿಗೆ ಸಲ್ಲಬೇಕು. ವ್ಯಸನಿಗಳೂ ದುರ್ಬಲರೂ ಆದ ಸಂಗಮ ವಂಶಜರನ್ನು ಬದಿಗೊತ್ತಿ ಕುಂದುತ್ತಿದ್ದ ಸಾಮ್ರಾಜ್ಯದ ಪ್ರತಿಷ್ಠೆಯನ್ನು ಪುನಃಪ್ರತಿಸ್ಥಾಪಿಸಿದ ಧೀಮಂತ ಸೇನಾನಿ ಆತ.

ಚಂದ್ರಗಿರಿಯ ಮಂಡಲೇಶ್ವರ ಸಾಳುವ ಗುಂಡನ ಮಗನಾದ ಸಾಳುವ ನರಸಿಂಹ ಒಬ್ಬ ಸಮರ್ಥ ಸೇನಾನಿ. ಮಲ್ಲಿಕಾರ್ಜುನನ ಕೊಲೆಯ ನಂತರ ಆತ ದಕ್ಷಿಣದಲ್ಲಿ ತನ್ನ ಸ್ವತಂತ್ರ ಅಧಿಕಾರವನ್ನು ಸ್ಥಿರಗೊಳಿಸಲು ಯತ್ನಿಸಿದ. 1469ರಲ್ಲಿ ಉದಯಗಿರಿಯನ್ನೂ 1480ರಲ್ಲಿ ಕೊಂಡವೀಡನ್ನೂ ಗಜಪತಿ ಯಿಂದ ಗೆದ್ದುಕೊಂಡ. ತನ್ನ ಸೇನಾನಿ ತುಳುವ ಈಶ್ವರನ ನೆರವಿನಿಂದ ದಕ್ಷಿಣ ಕರ್ನಾಟಕದ ನಾಗಮಂಗಲ, ಬೆಂಗಳೂರು, ಶ್ರೀರಂಗಪಟ್ಟಣಗಳನ್ನು ಗೆದ್ದು ಕೊಂಡ. ವಿರೂಪಾಕ್ಷನ ನಿಧನಾನಂತರ 1488ರಲ್ಲಿ ವಿಜಯನಗರಕ್ಕೆ ತನ್ನ ಸೇನಾನಿ ಈಶ್ವರನಾಯಕನ ಮಗ ನರಸನಾಯಕನನ್ನು ಕಳುಹಿಸಿದ. ಪ್ರತಾಪ ರಾಯ ರಾಜಧಾನಿಯಿಂದ ಓಡಿಹೋದ. ವಿಜಯನಗರ ಈ ರೀತಿ ಸಾಳುವ ನರಸಿಂಹನ ವಶವಾಯಿತು. ಸಾಮ್ರಾಜ್ಯದ ಬಹುಭಾಗಗಳನ್ನು ಸ್ವಸಾಮರ್ಥ್ಯ ದಿಂದ ಮೊದಲೇ ಗೆದ್ದುಕೊಂಡಿದ್ದ ಆತ ಕೊನೆಗೆ ರಾಜಧಾನಿಯನ್ನು ಈ ರೀತಿ ಕೈವಶ ಮಾಡಿಕೊಂಡು ಸಾಮ್ರಾಟನಾದ.

ನರಸಿಂಹನು ಪಟ್ಟವೇರಿದ ವರ್ಷವೇ ಗಜಪತಿ ಪುರುಷೋತ್ತಮ ಉದಯಗಿರಿಯ ಕೋಟೆಯನ್ನು ಮುತ್ತಿ ಗೆದ್ದುಕೊಂಡ. ಸಾಮ್ರಾಜ್ಯದ ಅನೇಕ ಕಡೆ ದಂಗೆಗಳಾದವು. ದಂಗೆಗಳನ್ನು ಎದುರಿಸಲು ಸಾಮ್ರಾಜ್ಯದ ಸೇನೆಯನ್ನು ಬಲಪಡಿಸುವ ಸಿದ್ಧತೆಯಲ್ಲಿದ್ದಂತೆ ನರಸಿಂಹ ತೀರಿಕೊಂಡ. ತನ್ನ ವಿಶ್ವಾಸಪಾತ್ರ ಸೇನಾನಿ ತುಳುವ ನರಸನ ಉಸ್ತುವಾರಿಗೆ ತನ್ನ ಇಬ್ಬರು ಎಳೆಯ ಕುಮಾರನನ್ನು ಆತ ಒಪ್ಪಿಸಿದ.

ನರಸಿಂಹ ಸ್ವತಃ ಸಂಸ್ಕೃತ ಪಂಡಿತ, ಲೇಖಕ. ಮಾಧ್ವ ಗುರಗಳಾದ ಶ್ರೀಪಾದರಾಯರಿಗೆ ಆತ ಭಕ್ತನಾಗಿದ್ದ.

ನರಸನಾಯಕ (1491-1508) : ಅಧಿಕಾರಕ್ಕೆ ಬಂದ ವರ್ಷವೇ ನರಸನಾಯಕ 1491ರಲ್ಲಿ ವಿಜಾಪುರದ ಆದಿಲ್‌ಷಾ ಯೂಸುಫನನ್ನು ಮಾನ್ವಿಯಲ್ಲಿ ಸೋಲಿಸಿ ರಾಯಚೂರು ದುರ್ಗವನ್ನು ಕಿತ್ತುಕೊಂಡ. ಆದರೆ 1493ರಲ್ಲಿ ರಾಜಧಾನಿಯಲ್ಲಾದ ಗೊಂದಲದ ಕಾಲದಲ್ಲಿ ರಾಯಚೂರು ಮತ್ತೆ ವಿಜಾಪುರಕ್ಕೆ ಸೇರಿತು.

ಸಾಳುವ ನರಸಿಂಹನ ಹಿರಿಪುತ್ರ ತಿಮ್ಮನನ್ನು ನರಸನಿಗಾಗದ ವ್ಯಕ್ತಿಯೊಬ್ಬ ಕೊಲೆ ಮಾಡಿದ. ಕಿರಿಯ ಪುತ್ರ ಎರಡನೆಯ ಸಾಳುವ ನರಸಿಂಹನಿಗೆ ಪಟ್ಟವಾಯಿತು. ಈತ ನರಸನಾಯಕನ ಜೊತೆ ಜಗಳವಾಡಿದ. ಆತನನ್ನು ಬಂಧನದಲ್ಲಿಟ್ಟು ನರಸ ತಾನೇ ರಾಜ್ಯ ನಡೆಸಿದ. 1503ರಲ್ಲಿ ನರಸ ತೀರಿಕೊಂಡಾಗಿ ನರಸನ ಹಿರಿಯ ಮಗ ತುಳುವ ನರಸಿಂಹ ರಾಜ್ಯಕಾರ್ಯ ನಿರ್ವಹಿಸಿದ. 1505ರಲ್ಲಿ ಸಾಳುವ ನರಸಿಂಹನ ಮಗ ಎರಡನೇಯ ನರಸಿಂಹ ತೀರಿಕೊಂಡಾಗ ತುಳುವ ನರಸಿಂಹನೇ ಸಾಮ್ರಾಟನಾದ. ಬಹುಶಃ ಉತ್ತರ ಕನ್ನಡ ಜಿಲ್ಲೆಯ ಗೆರಸೊಪ್ಪೆಯ ಸಾಳವ ವಂಶದವರಾದ ಈ ತುಳುವರು ಬಹು ಕಾಲ ತಮಿಳುನಾಡಿನಲ್ಲಿ ಇದ್ದವರು.

ತುಳುವ ನರಸಿಂಹ (1503-9) : "ಭುಜಬಲರಾಯ" ನೆಂದೂ ಪರಿಚಿತನಾಗಿರುವ ವೀರನರಸಿಂಹ ತನ್ನ ಅಲ್ಪ ಕಾಲದ ಆಳ್ವಿಕೆಯ ಕಾಲದಲ್ಲಿ ಸುತ್ತಲೂ ಭಾರಿ ಬಂಡಾಯಗಳನ್ನು ಎದುರಿಸಬೇಕಾಯಿತು. ಆಗಲೇ ಒಡೆದು ಹೋದ ಬಾಹಮನಿ ರಾಜ್ಯವು ಐದು ರಾಜ್ಯಗಳಾಗಿ ರೂಪುಗೊಳ್ಳುತ್ತಲಿತ್ತು. ವಿಜಯನಗರದ ಸರಹದ್ದಿನಲ್ಲಿ ಬಿಜಾಪುರದ ಆದಿಲ್‌ಷಾಹಿ ರಾಜ್ಯ ತಲೆ

ಎತ್ತಿತು. ವಿಜಾಪುರವು ಕೃಷ್ಣ-ತುಂಗಭದ್ರಾ ದೋ ಆಬ್‌ನ ಅನೇಕ ಭಾಗಗಳನ್ನು ನಗರನಾಯಕನ ಕಾಲದಲ್ಲೇ ಗೆದ್ದಿತ್ತು. ಯುಸೂಫ್ ಆದಿಲ್ ಷಾ ಆದವಾನಿಯ ಪಾಳೆಯಗಾರನ ನೆರವಿನಿಂದ ವಿಜಯನಗರದೆಡೆಗೆ ಮುಂದೊತ್ತಿದ. ನರಸಿಂಹನ ಸೇನಾನಿಗಳಾದ ಅರವೀಡು ರಾಮ ಮತ್ತು ತಿಮ್ಮರು ಆದಿಲ್ ಷಾನನ್ನ ಸೋಲಿಸಿ ಆದವಾನಿಯನ್ನು ಗೆದ್ದುಕೊಂಡರು. ಉಮ್ಮತ್ತೂರು, ಪಶ್ಚಿಮ ಕರಾವಳಿಗಳ ಬಂಡಾಯನ್ನು ಆತ ಎದುರಿಸಬೇಕಾಯಿತು. ಸಾಮ್ರಾಜ್ಯವು ವಿಕಟ ಸ್ಥಿತಿಯಲ್ಲಿದ್ದಾಗಲೇ ಆತ ತೀರಿಕೊಂಡ.

ತುಳುವ ನರಸಿಂಹ ಸಮರ್ಥನಾದ ದೊರೆ. ರಾಜ್ಯದಲ್ಲಿ ಕಂದಾಯ ಪದ್ಧತಿಯನ್ನು ಸುಧಾರಿಸಲು ಆತ ಯತ್ನಿಸಿದ. ಸೇನೆಯನ್ನು ಬಲಗೊಳಿಸಲು ಕ್ರಮ ಕೈಗೊಂಡ. ಪಶ್ಚಿಮ ಕರಾವಳಿಗೆ ಹೊಸದಾಗಿ ಬಂದ ಪೋರ್ಚುಗೀಸರ ಜೊತೆ ಸ್ನೇಹ ಬೆಳೆಸಲು ಮುಂದಾದ. ಸೇನೆಗಾಗಿ ಅವರಿಂದ ಅಶ್ವಗಳನ್ನು ಕೊಂಡ. ಅವನ ಅಕಾಲ ಮರಣದಿಂದಾಗಿ ಅವನ ವ್ಯಕ್ತಿತ್ವ ಬೆಳಕಿಗೆ ಬರಲು ಸಾಧ್ಯವಾಗಲಿಲ್ಲ. ನರಸನಾಯಕನ ಜ್ಯೇಷ್ಠ ಸತಿ ತಿಪ್ಪಾಜಿಯ ಪುತ್ರ ಆತ.

ಕೃಷ್ಣದೇವರಾಯ (1509-152.) : ವೀರ ನರಸಿಂಹನ ನಂತರ ಅವನ ಮಲತಮ್ಮ (ನರಸನ ರಾಣಿ ನಾಗಲೆಯ ಮಗ) ಕೃಷ್ಣದೇವರಾಯನಿಗೆ ಪಟ್ಟವಾಯಿತು. ವಾಸ್ತವವಾಗಿ ವೀರ ನರಸಿಂಹನ ಕಾಲದಿಂದಲೇ ಅವನು ಜಂಟಿ ದೊರೆಯಾಗಿದ್ದ. ವಿಜಯನಗರದ ದೊರೆಗಳಲ್ಲೇ ಅತ್ಯಂತ ಸಮರ್ಥನಾದ ಕೃಷ್ಣದೇವ ಭಾರತದ ಇತಿಹಾಸದಲ್ಲಿ ಗಣ್ಯಸ್ಥಾನವುಳ್ಳ ದೊರೆ.

ಪಟ್ಟಕ್ಕೆ ಬಂದಕೂಡಲೇ ಕೃಷ್ಣರಾಯನನ್ನು ಬಾಹಮನಿಯ ಸುಲ್ತಾನನು ಆದಿಲ್‌ಷಾನ ನೆರವಿನಿಂದ ಕೆಣಕಿದನು. ದೋಣಿ ಎಂಬಲ್ಲಿ ನಡೆದ ಕದನದಲ್ಲಿ ಬಾಹಮನಿ ಸುಲ್ತಾನನಿಗೆ ಸೋಲಾಯಿತು ; ಸುಲ್ತಾನನು ಗಾಯಗೊಂಡ, ಓಡುತ್ತಿರುವ ಬಾಹಮನಿ ಸೇನೆಯನ್ನು ಅಟ್ಟಿಸಿಕೊಂಡು ಕೃಷ್ಣದೇವನು ಕೋವಿಲ ಕೊಂಡದಲ್ಲಿ ಅವನನ್ನು ಸೋಲಿಸಿದ. ಈ ವಿಜಯದ ನಂತರ 1510ರಲ್ಲಿ ಅವನ ರಾಜ್ಯಾಭಿಷೇಕವಾಯಿತು. ತಿರುಗಿ ಅವನನ್ನು ಕೆಣಕಿದ ವಿಜಾಪುರದ ಆದಿಲ್ ಖಾನ್ ಈತನ ಕೈಯಲ್ಲಿ ಹತನಾದ, ಎಂದು 'ಆಮುಕ್ತ ಮಾಲ್ಯದ'ಲ್ಲಿ ಹೇಳಿದೆ. ಇದಾದನಂತರ ಹೋ ಆಬ್‌ನಲ್ಲಿ ನುಗ್ಗಿ 1512ರಲ್ಲಿ ಕೃಷ್ಣದೇವನು ರಾಯಚೂರು ಕೋಟೆಯನ್ನು ಗೆದ್ದುಕೊಂಡ. ಇಪ್ಪತ್ತು ವರ್ಷಗಳ ನಂತರ

ರಾಯಚೂರು ಮತ್ತೆ ಸಾಮ್ರಾಜ್ಯದ ವಶವಾಯಿತು ಇದೇ ಕಾಲಕ್ಕೆ ದಕ್ಷಿಣದಲ್ಲಿ ಬಂಡೆದ್ದ -ಶ್ರೀರಂಗಪಟ್ಟಣ, ಶಿವನ ಸಮುದ್ರ ಪ್ರದೇಶಗಳ-ಉಮ್ಮತ್ತೂರು ಪಾಳೆಯಗಾರನನ್ನೂ ಆತ ಸೋಲಿಸಿದ.

ಇದಾದಮೇಲೆ ಸಾಮ್ರಾಟ ಆಂಧ್ರದ ಕಡೆ ಗಮನಹರಿಸಿದ, 1513ರಲ್ಲಿ ದುರ್ಗಮವಾದ ಕೋಟೆ ಉದಯಗಿರಿಯನ್ನು ಗಜಪತಿಯಿಂದ ಭಾರಿ ಶ್ರಮದ ನಂತರ ಗೆದ್ದುಕೊಂಡ. ಅಲ್ಲಿಂದ ಮುಂದೆ ಕಂದುಕೂರು, ಅದ್ದಂಕಿ, ಪೆನುಕೊಂಡ, ಬೆಲ್ಲಮುಕೊಂಡ, ನಾಗಾರ್ಜುನಕೊಂಡ, ಕೇತವರಂಗಳನ್ನು ವಶಪಡಿಸಿ ಕೊಂಡವೀಡನ್ನು ಮುತ್ತಿದ. ದೀರ್ಘಕಾಲದ ಮುತ್ತಿಗೆಯ ನಂತರ ಕೊಂಡವೀಡು ವಶವಾಯಿತು (1515) ಆಮೇಲೆ ವಿಜಯವಾಡ ಮಾರ್ಗವಾಗಿ ಮುಂದೊತ್ತಿ ಕೊಂಡಪಲ್ಲಿ ಎಂಬ ಇನ್ನೊಂದು ದುರ್ಗಮ ಕೋಟೆಯನ್ನು ವಶಪಡಿಸಿಕೊಳ್ಳಲಾಯಿತು. ಮುಂದೆ ರಾಜಮಹೇಂದ್ರವರಂ ಅನ್ನು ಗೆದ್ದು ಸಿಂಹಾಚಲದವರೆಗೆ ಕೃಷ್ಣದೇವ ವಿಜಯಯಾತ್ರೆ ನಡೆಸಿದ. ಪೊಟನೂರಿನಲ್ಲಿ ಕೃಷ್ಣದೇವರಾಯನು ವಿಜಯಸ್ತಂಭವೊಂದನ್ನು ಸ್ಥಾಪಿಸಿದ. ಆಮೇಲೆ ಗಜಪತಿಯ ರಾಜಧಾನಿ ಕಟಕವನ್ನು ಮುತ್ತಿದ ಕೊನೆಗೆ 1518ರಲ್ಲಿ ಗಜಪತಿ ವಿಜಯನಗರದೊಡನೆ ಒಪ್ಪಂದ ಮಾಡಿಕೊಂಡು ತನ್ನ ಮಗಳಾದ ಜಗನ್ಮೋಹಿನಿ ಅಥವಾ ತುಕ್ಕಾದೇವಿಯನ್ನು ಕೃಷ್ಣದೇವನಿಗೆ ಮದುವೆಮಾಡಿಕೊಟ್ಟ.

ಇದೇ ಕಾಲದಲ್ಲಿ ಗೋಲ್ಕೊಂಡದ ಕುತುಬ್ ಷಾ ಕೊಂಡವೀಡನ್ನು ಮುತ್ತಿ ವಶಪಡಿಸಿಕೊಳ್ಳಲು ಯತ್ನಿಸಿದಾಗ ಅವನನ್ನು ವಿಜಯನಗರದ ಸೇನೆ ಸೋಲಿಸಿ ಓಡಿಸಿತು. ಕೃಷ್ಣರಾಯನು ಒರಿಸ್ಸದಲ್ಲಿ ದಂಡಯಾತ್ರೆ ಕೈಗೊಂಡಾಗ ಆದಿಲ್ ಷಾ ರಾಯಚೂರನ್ನು ಮತ್ತೆ ಗೆದ್ದುಕೊಂಡ. 1520ರಲ್ಲಿ ರಾಯಚೂರನ್ನು ತಿರುಗಿ ವಿಜಯನಗರ ವಶಪಡಿಸಿಕೊಂಡಿತು. ಇದಾದ ಮೇಲೆ ಕೃಷ್ಣದೇವರಾಯನು ಇಸ್ಮಾಯಿಲ್ ಆದಿಲ್ ಷಾನನ್ನು ಅಟ್ಟಿಸಿಕೊಂಡು ಹೋಗಿ ಬಿಜಾಪುರ ನಗರವನ್ನೇ ಪ್ರವೇಶಿಸಿದ. ಮಾರ್ಚ್ 19ರಿಂದ ನಾಲ್ಕು ದಿನ ಅಲ್ಲಿ ತಳವೂರಿದ. ಕೆಂಬಾವಿ ಮತ್ತು ಶೋರಾಪುರಗಳಲ್ಲಿ ನಡೆದ ಎರಡು ಕದನಗಳಲ್ಲಿ ವಿಜಯನಗರದ್ದೇ ಮೇಲ್ಗೈಯಾಯಿತು. ಅಲ್ಲಿಂದ ಕಲ್ಬುರ್ಗಿಗೆ ಸಾಗಿ ಬಂಧನದಲ್ಲಿರುವ ಬಾಹಮನಿ ಸುಲ್ತಾನನ್ನು ಬಿಡುಗಡೆ ಮಾಡಿ ಆತನನ್ನೇ ಸುಲ್ತಾನನೆಂದು ಘೋಷಿಸಿದ. "ಯವನರಾಜ್ಯ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದು

ಧರಿಸಿ ಸಾಮ್ರಾಟ ರಾಜಧಾನಿಗೆ ಮರಳಿದ (1523). ಇದಾದ ನಂತರ ತನ್ನ ಕೊನೆಗಾಲದವರೆಗೆ ಶಾಂತಿಯಿಂದ ಆಳಿದ.

ಕೃಷ್ಣದೇವರಾಯ ಸ್ವತಃ, ಧೀರ, ವಿದ್ಯಾವಂತ, ರಸಿಕ, ವಿದ್ಯಾಪಕ್ಷಪಾತಿ, ಧಾರ್ಮಿಕ. ವಿರೂಪಾಕ್ಷ ದೇವಾಲಯಕ್ಕೆ ಕಲ್ಯಾಣ ಮಂಟಪ, ಒಂದು ಗೋಪುರಗಳನ್ನು ಆತ ಸೇರಿಸಿದ. ಹಜಾರ ರಾಮಸ್ವಾಮಿ ದೇವಾಲಯವನ್ನು ಆತ ವಿಸ್ತರಿಸಿದ. ಉದಯಗಿರಿಯಿಂದ ತಂದ ಶ್ರೀ ಕೃಷ್ಣಮೂರ್ತಿಯೊಂದನ್ನು ಪ್ರತಿಷ್ಠಾಪಿಸಲು ರಾಜಧಾನಿಯಲ್ಲಿ ಕೃಷ್ಣಸ್ವಾಮಿ ಮಂದಿರವನ್ನು ಕಟ್ಟಿಸಿದ. ವಿಠಲಸ್ವಾಮಿ ದೇವಾಲಯವು ಆತನದೇ ರಚನೆ. ಹಂಪೆಯಲ್ಲಿನ ಬೃಹತ್ ಗಾತ್ರದ ಲಕ್ಷ್ಮೀನರಸಿಂಹಸ್ವಾಮಿಯ ಪ್ರತಿಮೆ ಈತನಿಂದಲೇ ಸ್ಥಾಪಿತವಾದದ್ದು. ನಾಗಲಾಪುರ (ಹೊಸಪೇಟೆ) ತಾಯಿಯ ಸ್ಮರಣೆಗಾಗಿ ಕಟ್ಟಿದ ಬಡಾವಣೆ.

ಮಾಧ್ವ ಗುರು ವ್ಯಾಸತೀರ್ಥರು ಕೃಷ್ಣದೇವನಿಗೆ ತೀರ ಹತ್ತಿರದವರಾಗಿದ್ದರು. ಕನ್ನಡ ಕವಿ ತಿಮ್ಮಣ್ಣ ಸಾಮ್ರಾಟನಿಂದ ಸನ್ಮಾನಿತನಾಗಿದ್ದ. ತೆಲುಗು ಸಾಹಿತ್ಯದ ಅಷ್ಟದಿಗ್ಗಜರೆಂದು ಖ್ಯಾತರಾಗಿದ್ದ ಪೆದ್ದನ, ಧೂರ್ಜಟಿ, ರಾಮಕೃಷ್ಣ ಮುಂತಾದ ಕವಿಗಳು ಕೃಷ್ಣದೇವನ ಆಸ್ಥಾನಿಕರು. ಸ್ವತಃ ರಾಯ "ಆಮುಕ್ತ ಮಾಲ್ಯದ" ಎಂಬ ತೆಲುಗು ಕಾವ್ಯ ರಚಿಸಿದ್ದಾನೆ.

ಪೋರ್ತುಗೀಸರ ಜೊತೆ ಆತ ನಿಕಟ ಸಂಬಂಧ ಇರಿಸಿಕೊಂಡಿದ್ದ. 1510ರಲ್ಲಿ ಪೋರ್ತುಗೀಸರು ಗೋವೆಯನ್ನು ಗೆದ್ದುಕೊಂಡಾಗ ರಾಯ ಅವರಿಗೆ ನೆರವು ನೀಡಿದ್ದ. ಅವರಿಂದ ಸೇನೆಗೆ ಬೇಕಾದ ಕುದುರೆಗಳನ್ನು ಕೊಂಡುಕೊಂಡ. ಪಾಯೆಸ್ ಎಂಬ ಪೋರ್ತುಗೀಸ್ ಪ್ರವಾಸಿ ಇದೇ ಕಾಲ ರಾಜಧಾನಿಗೆ ಭೇಟಿ ನೀಡಿದ್ದ. ಆತ ಸಾಮ್ರಾಜ್ಯದ ಘನತೆಯನ್ನು ದಸರೆಯ ಆಚರಣೆಯ ವೈಭವವನ್ನೂ ಧಾರಾಳವಾಗಿ ಹೊಗಳಿದ್ದಾನೆ. ಕೃಷ್ಣದೇವನು "ಅತ್ಯಂತ ಗೌರವಿತನಾದ ಹಾಗೂ ಪರಿಪೂರ್ಣವಾದ ದೊರೆ" ಎಂದು ಪಾಯೆಸ್ ಹೇಳಿರುವನಲ್ಲದೆ, "ಈತ ಮಹಾನ್ ಆಡಳಿತಗಾರ, ನ್ಯಾಯಪರನಾದವನು" ಎಂದಿದ್ದಾನೆ. ತಿರುಮಲದೇವಿ, ಚಿನ್ನಾದೇವಿ ಇವನ ಮುಖ್ಯ ರಾಣಿಯರು.

ಕೃಷ್ಣದೇವರಾಯನ ಕಾಲದಲ್ಲಿ ಸಾಮ್ರಾಜ್ಯವು ನಾಲ್ದೆಸೆಯಲ್ಲೂ ವಿಜಯ ಸಾಧಿಸುವುದರ ಜೊತೆಗೆ ಕೃಷಿ, ವಾಣಿಜ್ಯಗಳ ಕ್ಷೇತ್ರದಲ್ಲಿ ಭಾರಿ ಪ್ರಗತಿ

ಸಾಧಿಸಿತು. ಪೋರ್ತುಗೀಸರ ಚಟುವಟಿಕೆಯಿಂದ ಸಾಮ್ರಾಜ್ಯ ಪಶ್ಚಿಮದ ಕರಾವಳಿಯ ಬಂದರುಗಳಲ್ಲಿ ಸಮೃದ್ಧ ವ್ಯಾಪಾರ ಬೆಳೆಯಿತು.

ದಕ್ಷಿಣ ಭಾರತವನ್ನು ಆಳಿದ ಸಾಮ್ರಾಟರಲ್ಲಿ ಕೃಷ್ಣದೇವನಂಥ ಘನ ವಂತಿಕೆಯ ದೊರೆ ಬೇರೊಬ್ಬನಿಲ್ಲ.

ಅಚ್ಯುತರಾಯ (1529–42) : ಮರಣ ಕಾಲದಲ್ಲಿ ಕೃಷ್ಣದೇವ ರಾಯನಿಗೆ ಒಂದೂವರೆ ವರ್ಷದ ಮಗನಿದ್ದ. ಆದರೆ ತನ್ನ ಪುತ್ರನನ್ನು ಪಟ್ಟಕ್ಕೇರಿಸಲು ಇಚ್ಛಿಸದೆ, ತನ್ನ ಮಲಸೋದರ (ನರಸನಾಯಕನ ಸತಿ ಓಬಾಂಬಿಕೆಯ ಮಗು) ಅಚ್ಯುತನಿಗೇ ಪಟ್ಟವಾಗಬೇಕೆಂದು ಆತ ಸೂಚಿಸಿದ್ದ ನೆಂದು ನುನಿಜ್ ಹೇಳಿದ್ದಾನೆ. ಅಚ್ಯುತನಿಗೆ ಪಟ್ಟವಾದರೂ ಆತನ ಅಧಿಕಾರ ವನ್ನು ಅನೇಕರು ವಿರೋಧಿಸಿದರು. ಈ ಪೈಕಿ ಕೃಷ್ಣದೇವನ ಅಳಿಯ (ಕೃಷ್ಣದೇವನ ಪುತ್ರಿ ತಿರುಮಲಾಂಬೆಯ ಪತಿ) ಆರವೀಡು ರಾಮರಾಯ ಪ್ರಮುಖ. ಮುಂದೆ ರಾಮರಾಯ ಅಚ್ಯುತನ ಬೆಂಬಲಿಗನಾದ. ಕೃಷ್ಣದೇವನ ಕೊನೆಗಾಲದಲ್ಲೇ-ಆತ ಅಸೌಖ್ಯವಾಗಿದ್ದಾಗ-ಆದಿಲ್‌ಷಾ ವಿಜಯನಗರದ ಸಾಮ್ರಾಜ್ಯದ ಮೇಲೆ ಒತ್ತರಿಸಲಾರಂಭಿಸಿದ್ದು, ಮುಂದೆ ನಡೆದ ಅಂತಃಕಲಹದ ಕಾಲದಲ್ಲಿ ರಾಯಚೂರು, ಮುದಗಲ್‌ಗಳನ್ನು ಗೆದ್ದುಕೊಂಡಿದ್ದ. ಗಜಪತಿ ಕುತುಬ್‌ಷಾ ಕೂಡಾ ಸಾಮ್ರಾಜ್ಯಕ್ಕೆ ಕಿರುಕುಳ ಕೊಡಲು ಮುಂದಾದರು. ಸಮರ್ಥನಾದ ಅಚ್ಯುತ ಪೂರ್ವದೆಸೆಯ ಎರಡು ಶತ್ರುಗಳನ್ನು ಹೊಡೆದಟ್ಟಿದ. ಆದರೆ ಆತನ ಆಡಳಿತದ ಅವಧಿಯು ಬಂಡಾಯವನ್ನು ಎದುರಿಸುವುದರಲ್ಲೇ ಕಳೆಯಿತು. 1505ರಲ್ಲಿ ಆತ ರಾಯಚೂರನ್ನು ಮತ್ತೆ ಗೆದ್ದುಕೊಂಡ. ದಕ್ಷಿಣದ ತಿರುವಾಂಕೂರಲ್ಲಿ ನಡೆದ ಬಂಡಾಯವನ್ನೂ ಆತ ಹತ್ತಿಕ್ಕಿದ. ಪಾಂಡ್ಯ ರಾಜ ಪುತ್ರಿ ವರದಾಂಬಿಕೆ ಇವನ ರಾಣಿ.

ಅಚ್ಯುತನ ಕಾಲಕ್ಕೆ ವಿಜಯನಗರಕ್ಕೆ ಬಂದ ಪೋರ್ತುಗೀಸ್ ಪ್ರವಾಸಿ ನುನಿಸ್ ಅಚ್ಯುತನನ್ನು ವ್ಯಸನಿ, ಪುಕ್ಕಲು ಮನುಷ್ಯ, ಅಪ್ರಮಾಣಿಕ,ಎಂದೆಲ್ಲ ಬರೆದಿದ್ದಾನೆ. ಆದರೆ ಇಂಥ ಅಪಾದನೆಗಳಲ್ಲಿ ಹುರುಳಿಲ್ಲ. ಅಚ್ಯುತನು ನಿಜ ವಾಗಿ ಧೀರ ಹಾಗೂ ಪ್ರಮಾಣಿಕ ಎಂದು ಅನ್ಯಮೂಲಗಳಿಂದ ತಿಳಿಯುತ್ತದೆ. ವಿಕಟ ಪರಿಸ್ಥಿತಿಯಲ್ಲಿ ರಾಜ್ಯವಾಳಿದ ಆತನ ಗುಣಗಳು ಪ್ರಕಟವಾಗಲು ನಿಜ ವಾಗಿ ಅವಕಾಶವಾಗಲಿಲ್ಲ. ಹೇಗಿದ್ದರೂ ಸಾಮ್ರಾಜ್ಯದ ಶಕ್ತಿ ಕುಂದದಂತೆ ಆತ

ಎಚ್ಚರವಹಿಸಿದ. "ಅಚ್ಯುತಾಭ್ಯುದಯಂ" ಮತ್ತು "ವರದಾಂಬಿಕಾ ಪರಿಣಯಂ" ಅಚ್ಯುತನ ಜೀವನದ ವಿಚಾರ ತಿಳಿಸುವ ಸಂಸ್ಕೃತ ಕಾವ್ಯಗಳು.

**ಸದಾಶಿವರಾಯ** (1543-70): ಅಚ್ಯುತನು ತೀರಿಕೊಂಡೊಡನೆ ಅವನ ಅಪ್ರಾಪ್ತ ವಯಸ್ಕ ಪುತ್ರ ವೆಂಕಟನಿಗೆ ಪಟ್ಟವಾಯಿತು. ಅಚ್ಯುತನು ಪಾಂಡ್ಯವಂಶದರಾಣಿ ವರದಾಂಬಿಕೆಯ ಪುತ್ರ ಈತ. ಈ ರಾಜಪುತ್ರನ ಸೋದರ ಮಾವ ಸಲಕ ತಿಮ್ಮನೆಂಬಾತ ರಾಜರಕ್ಷಕನೆಂದಿದ್ದು ತಾನೇ ರಾಜನಾಗಲು ಹವಣಿಸಿದ. ಅಳಿಯ ರಾಮರಾಯನು ಅಚ್ಯುತನ ಸೋದರನಾಗಿದ್ದ ರಂಗ ರಾಯನ ಮಗ ಸದಾಶಿವನ ಪಟ್ಟದ ಹಕ್ಕನ್ನು ಮುಂದೊಡ್ಡಿದ ಮುಂದೆ ಸಲಕ ತಿಮ್ಮನನ್ನು ಸೋಲಿಸಿ ಸದಾಶಿವನನ್ನು ಪಟ್ಟಕ್ಕೇರಿಸಿದ. ಒಂದು ವರ್ಷ ಕಾಲ ರಾಜನಾಗಿದ್ದ ತುಳುವ ವೆಂಕಟನನ್ನು ಸಲಕ ತಿಮ್ಮನೇ ಕೊಂದುಹಾಕಿದ್ದ.

ಸದಾಶಿವರಾಯನು ಹೆಸರಿಗೆ ಮಾತ್ರ ರಾಜನಾಗಿದ್ದು ರಾಜ್ಯವ್ಯವಹಾರ ವನ್ನೆಲ್ಲ ಅಳಿಯ ರಾಮರಾಯನು ತನ್ನ ಸೋದರನಾದ ತಿರುಮಲ (ಈತಕೃಷ್ಣ ದೇವನ ಮಗಳು ವೆಂಗಳಾಂಬೆಯ ಪತಿ) ಮತ್ತು ವೆಂಕಟಾದ್ರಿ ಇವರ ನೆರವಿ ನಿಂದ ನಡೆಸಿದ

ರಾಮರಾಯ ಸಮರ್ಥನಾದ ಆಡಳಿತಗಾರ, ಶೂರನಾದ ಸೇನಾನಿ, ಉದಾರ ಮನೋವೃತ್ತಿಯನ್ನು ಆತ ಮಹತ್ವಾಕಾಂಕ್ಷೆಯವನಾಗಿದ್ದನೆಂಬು ದನ್ನು ಬಿಟ್ಟರೆ ಬಹುಶಃ ಔದಾರ್ಯವೇ ಅವನ ದುರ್ಗುಣ. ಉತ್ತರದ ಷಾಹಿ ದೊರೆಗಳ ಆಸ್ಥಾನದಿಂದ ಕೆಲಸ ಕೆಳೆದುಕೊಂಡು ಬಂದ ಅನೇಕ ಮುಸಲ್ಮಾನ ಸೈನಿಕರಿಗೂ ಸೇನಾನಿಗಳಿಗೂ ಆತ ಆಶ್ರಯ ನೀಡಿದ. ಮುಸಲ್ಮಾನ ಸರದಾರ ರಿಗೆ ಸೇನಾದಿಪತ್ಯದ ಅಧಿಕಾರಗಳನ್ನು ಇತ್ತ. ಹಳೆಯ ನಿಷ್ಠಾವಂತ ಅಧಿಕಾರಿ ಗಳನ್ನು ಕಿತ್ತುಹಾಕಿ ತನಗೆ ಬೇಕಾದವರನ್ನು ಹೊಸದಾಗಿ ನೇಮಕ ಮಾಡಿದ.

ರಾಮರಾಯನು ಉತ್ತರದ ಷಾಹಿದೊರೆಗಳ ನಡುವಣ ಅಂತಃಕಲಹದ ಲಾಭಪಡೆದು ವಿಜಯನಗರ ರಾಜ್ಯವನ್ನು ವಿಸ್ತರಿಸಲು ಯತ್ನಿಸಿದ ಈ ನೀತಿ ಗಾಗಿ ಕೆಲವು ಇತಿಹಾಸಕಾರರು ಅವನನ್ನು ಟೀಕಿಸಿದ್ದಾರೆ. ಆದರೆ ಆತ ನಿಪುಣ ರಾಜತಂತ್ರಜ್ಞನಂತೆ ವರ್ತಿಸಿದ್ದನಲ್ಲದೆ ಇನ್ನಾವ ಅಪರಾಧವನ್ನೂ ಮಾಡಲಿಲ್ಲ ವೆಂದು ಗಮನಿಸಬೇಕು. ರಾಮರಾಯನ ನೆರವಿನಿಂದ ಗೋಲ್ಕೊಂಡದಲ್ಲಿ ಪಟ್ಟ ವೇರಿದ ಇಬ್ರಾಹಿಂ ಕುತುಬ್ ಷಾ ಮತ್ತು ರಾಮರಾಯನಿಂದ ಪುತ್ರವಾತ್ಸಲ್ಯ

ಪ್ರೇಮವನ್ನು ಪಡೆದ ಅಲಿ ಆದಿಲ್‌ಷಾ ಇವರಿಬ್ಬರೂ ರಾಮರಾಯನ ಸ್ನೇಹ ಉಳಿಸಿಕೊಳ್ಳಲು ಯಾವ ಯತ್ನವನ್ನೂ ಮಾಡದೆ ವಿಜಯನಗರ ವಿರುದ್ಧ ದ್ವೇಷವನ್ನೇ ಕಾಯ್ದರು. ತಮ್ಮ ಒಳಜಗಳಗಳಲ್ಲಿ ಸದಾ ರಾಮರಾಯನು ಹಸ್ತಕ್ಷೇಪ ಮಾಡುವಂತೆ ಆಮಂತ್ರಿಸುತ್ತಲೂ ಇದ್ದರು. ಆದರೆ ಈ ನಾಲ್ಕು ಷಾಹಿ ರಾಜ್ಯಗಳೂ ಕೊನೆಗೊಮ್ಮೆ ಒಂದಾಗಿ 1564ರಲ್ಲಿ ವಿಜಯನಗರವನ್ನು ಸೋಲಿಸಲು ನಿರ್ಧರಿಸಿದವು.

1565 ಜನವರಿ 23ರಂದು ಕೃಷ್ಣಾನದಿ ದಂಡೆಯ ರಕ್ಕಸಗಿ–ತಂಗಡಗಿ ಗ್ರಾಮಗಳ ನಡುವೆ ವಿಜಯನಗರದ ಸೇನೆ ಷಾಹಿಗಳ ಸೇನೆಗೆ ಎದುರಾಯಿತು. ಭಾರತದ ಇತಿಹಾಸದಲ್ಲೇ ಭೀಕರವೆಂದು ಉಲ್ಲೇಖಿಸಲು ಯೋಗ್ಯವಾದ ಭಾರಿ ಕಾಳಗ ಅಂದು ನಡೆಯಿತು. ವಿಜಯನಗರವು ಭಾರಿ ಸಿದ್ಧತೆಯೊಡನೆ ಶತ್ರು ಗಳನ್ನು ಎದುರಿಸಿದರೂ ರಾಮರಾಯನ ಅತಿಯಾದ ಆತ್ಮವಿಶ್ವಾಸ ಮತ್ತು ಅವನ ಸೇನೆಯಲ್ಲಿದ್ದ ಇಬ್ಬರು ಮುಸಲ್ಮಾನ್ ದಂಡನಾಯಕರ ವಂಚನೆ ಯಿಂದಾಗಿ ಅಂತಿಮವಾಗಿ ವಿಜಯನಗರಕ್ಕೆ ಸೋಲಾಯಿತು.

ರಕ್ಕಸತಂಗಡಿಯ ಈ ಕಾಳಗದಲ್ಲಿ 80 ವರ್ಷಕ್ಕೂ ಹೆಚ್ಚು ಮುದುಕನಾದ (ಕೌತು ಹೇಳುವಂತೆ 96 ವರ್ಷದವನಾದ) ರಾಮರಾಯನು ಕೊಲ್ಲಲ್ಪಟ್ಟ. ವಿಜಯನಗರದ ಸೇನೆ ಅನಾಯಕವಾಗಿ ದಿಕ್ಕಾಪಾಲಾಗಿ ಓಡಿತು. ವೆಂಕಟಾ ದ್ರಿಯೂ ರಣರಂಗದಲ್ಲಿ ಸತ್ತ. ರಾಮರಾಯನ ಸೋದರ ತಿರುಮಲ ರಾಜ ಧಾನಿಗೆ ಮರಳಿ ಸಾಮ್ರಾಟ್ ಸದಾಶಿವನೊಡನೆ ಅಪಾರ ಸಂಪತ್ತಿನ ಸಹಿತ ವಾಗಿ ಪೆನುಕೊಂಡಗೆ ನಡೆದ.

ವಿಜಯದಿಂದ ಉನ್ಮತ್ತವಾದ ಶಾಹಿಗಳ ಸೈನ್ಯ ರಾಜಧಾನಿಗೆ ನುಗ್ಗಿತು. ಅನೇಕ ದಿನಗಳವರೆಗೆ ಆ ವಿಶಾಲ ನಗರವನ್ನು ಸೂರೆಮಾಡಿ ನಗರವನ್ನು ಹಾಳು ಗೆಡಹಿತು. ದೇಶವಿದೇಶಗಳ ವ್ಯಾಪಾರಿಗಳಿಗೂ ಪ್ರವಾಸಿಗರಿಗೂ ಆಕರ್ಷಣೀಯ ಕೇಂದ್ರವಾಗಿದ್ದ–ಸಮಕಾಲೀನ ವಿಶ್ವದ ಅತ್ಯಂತ ಹಿರಿಯ ನಗರಗಳಲ್ಲಿ ಒಂದಾದ–ವಿಜಯನಗರ ಕೆಲವೇ ತಿಂಗಳುಗಳ ಅವಧಿಯಲ್ಲಿ ಹಾಳು ಹಂಪೆ ಯಾಯಿತು ಸ್ಯುಯಲ್ ಅವರ ಶಬ್ದಗಳಲ್ಲೇ ಈ ದುರಂತವನ್ನು ಬಣ್ಣಿಸುವುದು ಒಳಿತು. "ಜಗತ್ತಿನ ಇತಿಹಾಸದಲ್ಲಿ ಬಹುಶಃ ಇದಕ್ಕೂ ಮೊದಲು ಇಂಥ ಧ್ವಂಸಕೃತ್ಯ, ಇಷ್ಟು ಶೀಘ್ರಾವಧಿಯಲ್ಲಿ, ಇಂಥ ಸುಂದರ

ನಗರದ ಮೇಲೆ, ನಡೆದಿರಲಿಕ್ಕಿಲ್ಲ: ಒಂದು ದಿನ ಶ್ರೀಮಂತ ಉದ್ಯಮಶೀಲ ಜನ ಸಮುದಾಯದಿಂದ ತುಂಬಿ ತುಳುಕಾಡುತ್ತಿದ್ದ ಸಮೃದ್ಧ ನಗರವಾಗಿದ್ದು, ಮರುದಿನ ಆಕ್ರಮಿತವಾಗಿ, ಸೂರೆಗೊಂಡು, ವರ್ಣಿಸಲಸದಳವಾದ ಪಾಶವಿಕ ನರಹತ್ಯೆ ಹಾಗೂ ಭೀಕರತೆಯ ದೃಶ್ಯಗಳಿಂದ ತುಂಬಿದ ಸ್ಥಳವಾಗಿತ್ತು" ಎರಡು ವರ್ಷಗಳ ನಂತರ ವಿಜಯನಗರವನ್ನು ಸಂದರ್ಶಿಸಿದ್ದ ಇಟಲಿಯ ಪ್ರವಾಸಿ ಫ್ರೆಡುಚಿ ಹೇಳುವಂತೆ ನಗರದಲ್ಲಿನ ಮನೆಗಳಲ್ಲಿ ಹುಲಿ ಮತ್ತು ಇತರ ಕಾಡು ಪ್ರಾಣಿಗಳು ವಾಸ ಮಾಡುವಂಥ ದುಸ್ಥಿತಿ ಉಂಟಾಗಿಬಿಟ್ಟಿತ್ತು.

ಮತ್ತೊಂದು ಈ ಭವ್ಯ ರಾಜಧಾನಿ ತಲೆ ಎತ್ತಲಿಲ್ಲ. ವಿಜಯನಗರದ ನಾಶದ ಪರಿಣಾಮವಾಗಿ ಹತ್ತಿರದ ಪೋರ್ತುಗೀಸ್ ರಾಜ್ಯ ಗೋವೆಯೂ ತನ್ನ ವ್ಯಾಪಾರವನ್ನು ಕಳೆದುಕೊಂಡು ಕಳೆಗುಂದಿತು.

ನಿರ್ಜನವಾದ ಹಂಪೆಯ ಅವಶೇಷಗಳನ್ನು ಸುತ್ತಾಡಲು ಒಂದು ದಿನ ಸಾಲದೆಂದರೆ, ಅದು ಎಷ್ಟು ಭವ್ಯ ನಗರವಾಗಿದ್ದಿರಬೇಕೆಂದು ನಾವು ಊಹಿಸಬಲ್ಲೆವು.



ತನ್ನ ಕೈಯಲ್ಲಿ ಸೋತಿದ್ದ ಇಸ್ಮಾಯಿಲ್ ಆದಿಲ್‌ಷಾ ತನ್ನ ಪಾದವನ್ನು ಚುಂಬಿಸಬೇಕೆಂದು ಕೃಷ್ಣದೇವರಾಯ ಹೇಳಿದಾಗಿನಿಂದ ಈ ವಿನಾಶದ ಬೀಜಗಳು ಮೊಳೆತವೆಂದು ತೋರುತ್ತದೆ.

ಬೇರೆ ಆಸ್ಥಾನದಿಂದ ಬಂದ ಸೇನಾನಿಗಳಿಗೆ ರಾಮರಾಯನು ಮಹತ್ವ ನೀಡಿದ್ದು ಸಾಮ್ರಾಜ್ಯಕ್ಕೆ ಘಾತವಾಯಿತು. ಗಿಲಾನಿ ಸೋದರರೆಂಬ ಇಬ್ಬರು ಸೇನಾನಿಗಳು ಯುದ್ಧ ಮಧ್ಯದಲ್ಲಿ ಪಕ್ಷಾಂತರ ಮಾಡಿ ವಿಜಯನಗರದ ಸೇನೆಗೆ ಘಾತಕರಾದರೆಂದು ಸೀಜರ್ ಫ್ರೆಡರಿಚಿ ಹೇಳಿದ್ದಾನೆ.

ವಿಜಯನಗರದ ಅಶ್ವದಳ ಹಾಗೂ ಫಿರಂಗಿ ದಳಗಳು ಶತ್ರು ಸೈನ್ಯದಷ್ಟು ಸಮರ್ಥವಾಗಿರಲಿಲ್ಲ. ರಾಮರಾಯನ ಆತ್ಮವಿಶ್ವಾಸವೂ ಅತಿಯಾದುದೆನಿಸಿತ್ತು. ರಕ್ಕಸತಂಗಡಿಯ ಸೋಲಿಗೆ ಇವು ಮುಖ್ಯ ಕಾರಣಗಳು.

## ೪. ಅರವೀಡು ವಂಶ

ಪೆನುಗೊಂಡೆಗೆ ತೆರಳಿದ ಅಳಿಯ ತಿರುಮಲ ಸಾಮ್ರಾಜ್ಯದ ದಕ್ಷಿಣ ಭಾಗದ ಮೇಲಣ ಹಿಡಿತವನ್ನು ಬಲಪಡಿಸಿಕೊಂಡ. 1570ರಲ್ಲಿ ಸದಾಶಿವನ ಕೊಲೆಯಾದ ನಂತರ ತಾನೇ ಸರ್ವತಂತ್ರ ಸ್ವತಂತ್ರ ದೊರೆಯಾದ ಸಾಮ್ರಾಜ್ಯವನ್ನು ಭಾಷೆಯ ಆಧಾರದ ಮೇಲೆ ಮೂರು ಮಂಡಲಗಳಾಗಿ ವಿಭಜಿಸಿದ ಅವುಗಳ ಮೇಲೆ ತನ್ನ ಮೂವರು ಪುತ್ರರನ್ನು ಮಂಡಲೇಶ್ವರರನ್ನಾಗಿ ನೇಮಿಸಿದ. ಉತ್ತರದಲ್ಲಿ ಗೋಲ್ಕೊಂಡ–ಬಿಜಾಪುರದ ಷಾಹಿಗಳ ದ್ವಂದ್ವ ನಡೆದುದರಿಂದ ದಕ್ಷಿಣದ ತಿರುಮಲನ ರಾಜ್ಯಕ್ಕೆ ವಿಶೇಷ ಹಾನಿಯಾಗಿರಲಿಲ್ಲ ತಿರುಮಲನು ವಿದ್ವಾಂಸನಾಗಿದ್ದು ಸಂಸ್ಕೃತ ಗ್ರಂಥವೊಂದನ್ನು ಬರೆದಿದ್ದಾನೆ.

1572ರಲ್ಲಿ ತಿರುಮಲನು ತೀರಿಕೊಂಡಾಗ ಅವನ ಹಿರಿಯಮಗ ಶ್ರೀರಂಗ ಪಟ್ಟವೇರಿದ. ಈತನ ಕಾಲದಲ್ಲಿ ಸಾಮ್ರಾಜ್ಯ ಇನ್ನಷ್ಟು ಕುಗ್ಗಿತು.

1586ರಲ್ಲಿ ಪಟ್ಟವೇರಿದ ತಿರುಮಲ ಮೂರನೇ ಮಗ ಎರಡನೆಯ ವೆಂಕಟ (1586-1614) ಅರವೀಡು ವಂಶದಲ್ಲೇ ಸಮರ್ಥನಾದ ದೊರೆ ತನ್ನ ರಾಜಧಾನಿಯನ್ನು ಆತ ತಿರುಪತಿಯ ಬಳಿಯ ಚಂದ್ರಗಿರಿಗೆ ಸ್ಥಳಾಂತರಿಸಿದ. ಪೆನುಗೊಂಡೆಯನ್ನು ಗೆಲ್ಲಲು ವಿಜಾಪುರ ಹಾಗೂ ಗೋಲ್ಕೊಂಡದವರು ನಡೆಸಿದ ಎರಡು ಪ್ರತ್ಯೇಕ ಯತ್ನಗಳನ್ನು ಆತ ವಿಫಲಗೊಳಿಸಿದ. ಉತ್ತರದ ಷಾಹಿಗಳನ್ನು ಸದೆಬಡಿಯಲು ವೆಂಕಟನ ನೆರವು ಕೇಳಿ ದೆಹಲಿಯ ಅಕ್ಬರ್ ವೆಂಕಟನಲ್ಲಿ ಎರಡು ಬಾರಿ ನಿಯೋಗ ಕಳುಹಿಸಿದ್ದ. 1610ರಲ್ಲಿ ಶ್ರೀರಂಗಪಟ್ಟಣವು ಮೈಸೂರು ರಾಜ ಒಡೆಯನ ವಶವಾಯಿತು.

ತನ್ನ ನಿಧನಾನಂತರ ತನ್ನ ಸೋದರನ ಪುತ್ರ ಶ್ರೀರಂಗನಿಗೆ ಪಟ್ಟವಾಗಬೇಕೆಂದು ವೆಂಕಟ ತಿಳಿಸಿದ್ದ. ವೆಂಕಟನ ಪ್ರಿಯಸಖಿ ಬಾಯಮ್ಮ ತನ್ನ ಮಗನೆಂದು (ವೆಂಕಟನಲ್ಲಿ ಸುಳ್ಳು ಹೇಳಿ) ಸಾಕಿದ್ದ ಕುಮಾರನೊಬ್ಬನ ಹಕ್ಕನ್ನು ಮುಂದೊಡ್ಡಿದಳು. ಇದರಿಂದ ಸಾಮ್ರಾಜ್ಯದಲ್ಲಿ ಅಂತರ್ಯುದ್ಧವಾಯಿತು. ಕೊನೆಗೆ ವೆಲುಗೋಟಿ ಯೆಚ್ಚಮನಾಯಕನ ನೆರವಿನಿಂದ ಶ್ರೀರಂಗನೇ ಪಟ್ಟವೇರಿದ. ಬರಸ್ ಎಂಬ ಪೋರ್ತುಗೀಸ್ ಪ್ರವಾಸಿ ಈ ವಿಚಾರವನ್ನು ವಿವರವಾಗಿ ತಿಳಿಸಿದ್ದಾನೆ. ಬಾಯಮ್ಮನ "ಮಗ"ನ ಪಕ್ಷದವರು ಶ್ರೀರಂಗನನ್ನು ಬಂದನದಲ್ಲಿಟ್ಟುಕೊಂಡರು.

1617ರಲ್ಲಿ ಅಂತರ್ಯುದ್ಧ ಕೊನೆಗೊಂಡು ಶ್ರೀರಂಗನ ಮಗ ರಾಮದೇವರಾಯನಿಗೆ ಪಟ್ಟವಾಯಿತು. ಈ ರಾಜಪುತ್ರನ ಬಾಲ್ಯ ಕಾಲದಲ್ಲಿ ಯೆಚ್ಚಮನಾಯಕ ತಾನೇ ರಾಜರಕ್ಷಕನಾಗಿ ಆಡಳಿತ ನಡೆಸಿದ. ಆದರೆ ಸಾಮ್ರಾಜ್ಯದಲ್ಲಿನ ವಿವಿಧ ಪಾಳೆಯಗಾರರು ಬಂಡೆದ್ದು ಶಾಂತಿಯನ್ನು ಕದಡಿದರು. ಈ ಗೊಂದಲದ ಲಾಭ ಪಡೆದು ವಿಜಾಪುರದವರು ಸಾಮ್ರಾಜ್ಯಕ್ಕೆ ಸೇರಿದ್ದ ಕರ್ನೂಲ (ಕಂದನವೊಲು) ಕೋಟೆಯನ್ನು ಗೆದ್ದುಕೊಂಡರು ಸಾಮ್ರಾಜ್ಯ ಇನ್ನಷ್ಟು ಕ್ಷೀಣಿಸಿತು.

ರಾಮದೇವನ ನಂತರ ಅಳಿಯ ರಾಮರಾಯನ ಮೊಮ್ಮಗ (ರಾಮರಾಯನ ಮಗ ಶ್ರೀರಂಗನ ಪುತ್ರ) ಮೂರನೇಯ ವೆಂಕಟನಿಗೆ ಪಟ್ಟವಾಯಿತು. (1632–42). ಸಾಮ್ರಾಜ್ಯದಲ್ಲಿ ಮತ್ತೊಮ್ಮೆ ಪಟ್ಟಕ್ಕಾಗಿ ಅಂತರ್ಯುದ್ಧವಾಯಿತು ಈ ರೀತಿ ದುರ್ಬಲವಾದ ಸಾಮ್ರಾಜ್ಯದ ಉತ್ತರ ಭಾಗದಲ್ಲಿನ ಕೆಳದಿ, ಬೆಂಗಳೂರಿನ ಪಾಳೆಯಗಾರರನ್ನು ಬಿಜಾಪುರದವರು ಸೋಲಿಸಿದರು. ಕೆಳದಿಯಿಂದ ಅವರು ಕಪ್ಪ ಪಡೆದರೆ, ಬೆಂಗಳೂರು ಪ್ರದೇಶವನ್ನು ವಿಜಾಪುರದ ದಂಡನಾಯಕ ಷಾಜಿ (ಶಿವಾಜಿಯ ತಂದೆ)ಗೆ ಜಾಗೀರಾಗಿ ನೀಡಲಾಯಿತು.

ಸಾಮ್ರಾಜ್ಯದ ಕೊನೆಯಲ್ಲಿ ಟಲ್ಲೂರು ರಾಜಧಾನಿಯಾಗಿತ್ತು. ಬಿಜಾಪುರದವರು ವೆಲ್ಲೂರಿನವರೆಗೂ ದಂಡೆತ್ತಿ ಬಂದರು. ಸಾಮ್ರಾಟ್ ವೆಂಕಟನ ತಮ್ಮನ ಮಗನೂ ಶ್ರೀರಂಗಪಟ್ಟಣದ ಮಾಂಡಲೀಕನೂ ಆದ ಶ್ರೀರಂಗ ವಿಜಾಪುರದವರಿಗೆ ನೆರವು ನೀಡಿದ. ಆದರೂ ವಿಜಾಪುರದ ಸೇನೆಯನ್ನು ಹೊಡೆ

ಪಟ್ಟಲಾಯಿತು. ಗೋಲ್ಕೊಂಡದವರ ದಾಳಿಯ ಕಾಲದಲ್ಲೇ ವೆಂಕಟ ತೀರಿ ಕೊಂಡ.

1642ರಲ್ಲಿ ವೆಂಕಟನ ಸೋದರನ ಮಗ ಶ್ರೀರಂಗನಿಗೆ ಪಟ್ಟವಾಯಿತು. ಹಿಂದಣ ಸಾಮ್ರಾಟನ ವಿರುದ್ಧ ಬಂಡೆದ್ದಿದ್ದ ಆತ ತನ್ನ ಮಾಂಡಲಿಕರ ಬೆಂಬಲ ಗಳಿಸಲು ಅಸಮರ್ಥನಾದ 1646ರಲ್ಲಿ ವಿಜಾಪುರ ಗೋಲ್ಕೊಂಡಗಳ ಜಂಟಿ ದಾಳಿಯಿಂದ ಶ್ರೀರಂಗ ಪಲ್ಲೂರನ್ನು ಕಳೆದುಕೊಂಡ. "ಸಾಮ್ರಾಜ್ಯವಿಲ್ಲದ ಸಾಮ್ರಾಟ"ನಾಗಿ ಕೆಳದಿ, ಮೈಸೂರುಗಳ ಮಾಂಡಲಿಕರ ಆಶ್ರಯ ಪಡೆದ ಈ ರೀತಿ ವಿಜಯನಗರದ ಸಾಮ್ರಾಜ್ಯ ಕೊನೆಗೊಂಡಿತು.

ವಿಜಯನಗರದ ಉತ್ತರ ಭಾಗಗಳು ವಿಜಾಪುರ, ಗೋಲ್ಕೊಂಡಗಳ ವಶ ವಾದವು. ಕರ್ನಾಟಕದಲ್ಲಿ ಕೆಳದಿ, ಮೈಸೂರುಗಳು ತಮಿಳುನಾಡಿನಲ್ಲಿ ತಂಜಾವೂರು, ಜಿಂಜಿ, ಮಧುರೆಯ ನಾಯಕರೂ ಸ್ವತಂತ್ರರಾದರು. ವಿಜಯ ನಗರದ ಸಾಂಸ್ಕೃತಿಕ ಪರಂಪರೆಯನ್ನು ಈ ರಾಜ್ಯಗಳು ಮುಂದುವರಿಸಿದುವು. ಅದರೆ "ಮರೆಯಲಾಗದ ಸಾಮ್ರಾಜ್ಯ" ಮಣ್ಣು ಪಾಲಾಯಿತು.

## ೫. ಆಡಳಿತ ಪದ್ಧತಿ

**ಆಡಳಿತ ಭಾಷೆ:** ವಿಜಯನಗರದ ದೊರೆಗಳು “ಪೂರ್ವದ ಮರ್ಯಾದೆ” ಯನ್ನು ನೆಚ್ಚಿ ನಡೆಸಿಕೊಂಡು ಬಂದವರು. ಹೀಗಾಗಿ ಇಡೀ ದಕ್ಷಿಣ ಭಾರತವನ್ನು ಆಳಿದ ಅವರು ತಾವು ಆಳಿದ ಪ್ರದೇಶದಲ್ಲಿನ ಪೂರ್ವದಿಂದ ನಡೆದು ಬಂದ ಸ್ಥಳೀಯ ಭಾಷೆಗಳಲ್ಲೇ ಆಡಳಿತ ನಡೆಸಿಕೊಂಡು ಬಂದರು. ವಿಜಯನಗರದ ಆಡಳಿತಕ್ಕೆ ಒಳಗಾದ ಕನ್ನಡ ಪ್ರದೇಶಗಳಲ್ಲಿ ಕನ್ನಡ ಭಾಷೆಯಲ್ಲೂ ಆಂಧ್ರದಲ್ಲಿ ತೆಲುಗು ಭಾಷೆಯಲ್ಲೂ ತಮಿಳುನಾಡಿನಲ್ಲಿ ತಮಿಳು ಭಾಷೆಯಲ್ಲೂ ನೂರಾರು ಶಾಸನಗಳನ್ನು ಬಿಟ್ಟುಹೋಗಿದ್ದಾರೆ.

ವಿಜಯನಗರದ ಆರಂಭದ ದೊರೆಗಳು ಕನ್ನಡ ಮೂಲದವರಾಗಿದ್ದುದರಿಂದ ಅವರ ತಮಿಳು, ತೆಲುಕು, ಸಂಸ್ಕೃತ ಭಾಷೆಯ ಶಾಸನಗಳಲ್ಲೂ ಕನ್ನಡ ಬಿರುದುಗಳು ಕಂಡುಬರುತ್ತವೆ. ಉದಾ : ಮೂರು ರಾಯರ ಗಂಡ, ಅಂತೆಂಬರ ಗಂಡ, ಭಾಷೆಗೆ ತಪ್ಪುವ ರಾಯರ ಗಂಡ ಇತ್ಯಾದಿ. ಸಂಸ್ಕೃತ ಭಾಷೆಯಲ್ಲಿರುವ ಅವರ ತಾಮ್ರ ಶಾಸನಗಳಲ್ಲಿನ ಕೊನೆಗೆ ಕನ್ನಡ ಲಿಪಿಯಲ್ಲಿ ‘ಶ್ರೀ ವಿರೂಪಾಕ್ಷ’ ಎಂದು ಅವರು ಸಹಿ ಹಾಕಿದ್ದು ಕಂಡುಬರುತ್ತದೆ. ತೆಲುಗು ಮೂಲದ ಅರವೀಡು ವಂಶದ ದೊರೆಗಳು ಆಂಧ್ರದಲ್ಲಿನ ಪೆನುಗೊಂಡ, ಚಂದ್ರಗಿರಿಗಳಿಂದ ಆಳುತ್ತಿದ್ದಾಗಲೂ ತಾವು “ಕರ್ನಾಟಕ ಸಿಂಹಾಸನ” ವನ್ನು ಆಳುತ್ತಿದ್ದುದಾಗಿ ಹೇಳಿಕೊಂಡಿದ್ದಾರೆ. ವಿಜಯನಗರದ ಒಟ್ಟು 7000 ಶಾಸನಗಳ ಪೈಕಿ 3,500 ಕನ್ನಡದಲ್ಲೂ, 2,000 ತಮಿಳಿನಲ್ಲೂ. 1,500 ತೆಲುಗುನಲ್ಲೂ ಇವೆ, ಎಂಬುದಾಗಿ ಲೆಕ್ಕ ಹಾಕಲಾಗಿದೆ. ಆಂಧ್ರ,

ತಮಿಳುನಾಡಿನಲ್ಲಿರುವ ಅನೇಕ ಶಾಸನಗಳೂ ಕನ್ನಡ ಭಾಷೆ ಮತ್ತು ಕನ್ನಡ ಲಿಪಿಯಲ್ಲಿವೆ; ಅನೇಕ ಸಂಸ್ಕೃತ ಶಾಸನಗಳು ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟಿವೆ. ಕನ್ನಡ ಭಾಷೆಗೆ ಸಾಮ್ರಾಜ್ಯ ಅಗ್ರ ಪ್ರಾಶಸ್ತ್ಯ ನೀಡಿತೆಂಬುದು ಇದರಿಂದ ಗೊತ್ತಾಗುತ್ತದೆ.

**ರಾಜತ್ವ :** ಪೂರ್ವದ ಮರ್ಯಾದೆಯನ್ನು ಪಾಲಿಸುತ್ತ ಬಂದ ವಿಜಯನಗರದ ರಾಜರು ಪ್ರಭುತ್ವದ ಬಗೆಗಿನ ಪ್ರಾಚೀನ ಹಿಂದೂ ಕಲ್ಪನೆಗಳನ್ನು ಶ್ರದ್ಧೆಯಿಂದ್ದ ಪಾಲಿಸಿದರು. ಕೃಷ್ಣದೇವರಾಯನ ತೆಲುಗು ಕೃತಿ "ಅಮುಕ್ತ ಮಾಲ್ಯ"ದಲ್ಲಿ ಅವನು ಹೇಳಿಕೊಂಡಿರುವಂತೆ, ರಾಷ್ಟ್ರದ (ರಾಜ) ಸಪ್ತಾಂಗಗಳಲ್ಲಿ ರಾಜನೇ ಅತ್ಯಂತ ಪ್ರಮುಖ. ಪ್ರಜೆಗಳಿಗೆ ರಕ್ಷಣೆ ಮತ್ತು ಅವರ ಸಂಕಟಗಳ ನಿವಾರಣೆ ರಾಜನ ಪ್ರಧಾನ ಕರ್ತವ್ಯವೆಂದೂ ಅವನು ತಿಳಿಸಿದ್ದಾನೆ.

"ರಾಜ ನಿರಂಕುಶನಾದ ಅಥವಾ ಸ್ವಯಮಾಡಳಿತ ನಡೆಸುವ ಪ್ರಭುವಲ್ಲ; ಆಗಿನ ಅಧಿಕಾರವು ಕೆಲವು ರೂಢಿ ಮತ್ತು ವಾಡಿಕೆಗಳಿಗೆ ಬದ್ಧವಾದುದು" ಎಂದು ಡಾ|| ಟಿ. ವಿ. ಮಹಾಲಿಂಗಂ ಅವರು ತಿಳಿಸಿದ್ದಾರೆ.

"ನಿನ್ನ ಪ್ರಜೆಗಳನ್ನು ಪಾಲಿಸುವಲ್ಲಿ ಸದಾ ದಕ್ಷನಾಗಿರು", ತನ್ನ ದೇಶದ ಪ್ರಗತಿ ಮತ್ತು ಸಮೃದ್ಧಿಯನ್ನು ಬಯಸುವ ರಾಜನ ಹಿತವನ್ನೇ ಅವನ ಜನರು ಬಯಸುತ್ತಾರೆ" ಎಂದು ಕೃಷ್ಣದೇವರಾಯ ತನ್ನ ರಾಜತ್ವದ ಕಲ್ಪನೆಯನ್ನು ಸ್ಪಷ್ಟಪಡಿಸಿದ್ದನಲ್ಲದೆ, "ಅಭಿಷಿಕ್ತ ಪ್ರಭುವು ಧರ್ಮದ ಕಡೆ ಒಂದು ಕಣ್ಣನ್ನಿಟ್ಟೇ ಆಳಬೇಕು" ಎಂದು ಎಚ್ಚರಿಸಿದ್ದಾನೆ.

**ಮಂತ್ರಿಗಳು :** ಸಾಮ್ರಾಟನು ಸಾಮ್ರಾಜ್ಯದ ಐಕ್ಯದ ಪ್ರತೀಕವಾಗಿದ್ದನಲ್ಲದೆ ಆಡಳಿತ ಚಕ್ರದ ಅಕ್ಷದಂತಿದ್ದನು. ಆದರೆ ಆಡಳಿತವು ಮಂತ್ರಿಗಳ ನೆರವು ಮತ್ತು ಸಲಹೆಯಂತೆ ನಡೆಯುತ್ತಿತ್ತು. ನುನಿಸ್ ಹೇಳಿರುವಂತೆ ಎರಡನೆಯ ದೇವರಾಯನಿಗೆ 20 ಮಂತ್ರಿಗಳಿದ್ದರು. ಪ್ರಧಾನ ಸಚಿವರು 'ಮಹಾ ಪ್ರಧಾನಿ' 'ಶಿರಪ್ರಧಾನಿ' ಎಂದು ಪರಿಚಿತನಾಗಿದ್ದ. ಮಂತ್ರಿಗಳು ಸೇನಾಧಿಕಾರಿಗಳೂ ಆಗಿದ್ದರು. ಬುಕ್ಕನ ಕೈಕೆಳಗೆ ಮುದ್ದ ದಂಡನಾಥನು ಪ್ರಧಾನಿಯಾಗಿದ್ದ ; ಎರಡನೆಯ ಹರಿಹರನ ಕಾಲದಲ್ಲೂ ಆತ ಮುಂದುವರಿದ. ಸಾಳುವ ತಿಮ್ಮನು ಕೃಷ್ಣದೇವರಾಯನ ಪ್ರಧಾನಿಯಾಗಿದ್ದ.

ಧರ್ಮರಕ್ಷಣೆಗಾಗಿ ಸ್ಥಾಪಿತವಾದ ವಿಜಯನಗರವು ಪ್ರಧಾನವಾಗಿ ಒಂದು ಸೈನಿಕ (ಮಿಲಿಟರಿಸ್ಟೇಟ್) ರಾಜ್ಯವಾಗಿತ್ತು. ಹೀಗಾಗಿ ಸಾಮ್ರಾಜ್ಯದ ಎಲ್ಲ ಆಡಳಿತಾಧಿಕಾರಿಗಳು ಸೇನಾನಾಯಕರೂ ಆಗಿದ್ದು ತಮ್ಮ ಕೈಕೆಳಗೆ ಸೈನ್ಯ ವೊಂದನ್ನು ಇಟ್ಟುಕೊಂಡಿದ್ದರು. ಈ ಪದ್ಧತಿ ಮಂತ್ರಿಗಳಿಂದ ಆರಂಭವಾಗಿ ಕೊನೆಯ ಸ್ಥಾನೀಯ ಅಧಿಕಾರಿಯವರೆಗೆ ಮುಟ್ಟಿತ್ತು. ಬ್ರಾಹ್ಮಣ ಮಂತ್ರಿ ಗಳಾದ ಸಾಳುವ ತಿಮ್ಮ ಲಕ್ಷ್ಮೀಧರ (ಎರಡನೆಯ ದೇವರಾಯನ ಕಾಲದಲ್ಲಿ) ಮುಂತಾದವರು ಸಮರ್ಥ ಸೇನಾನಿಗಳೂ ಆಗಿದ್ದರು.

**ಕೇಂದ್ರ ಆಡಳಿತ ಕಛೇರಿ:** ಅಬ್ದುರ್ ರ‍ಜಾಕ್, ನುನಿಸ್ ಮುಂತಾದ ವಿದೇಶೀ ಸಂದರ್ಶಕರು ಕೇಂದ್ರ ಆಡಳಿತದ ಕಛೇರಿಯೊಂದರ ಅಸ್ತಿತ್ವದ ವಿಚಾರ ತಿಳಿಸಿದ್ದಾರೆ. ನಾಲ್ವತ್ತು ಕಂಬಗಳ "ದಿವಾನ್ ಖಾನೆ" (ಮಂತ್ರಿಯ ಭವನ) ಯೊಂದು ರಾಜನ ಅರಮನೆಯ ಬಲಕ್ಕಿದೆ, ಎಂದು ರಜಾಕ್ ಹೇಳುತ್ತಾನೆ. ಅಲ್ಲಿ ದಾಸ್ತಾವೇಜು (ದಾಖಲೆ ಪತ್ರ) ಗಳ ಸಂಗ್ರಹವೇ ಇದೆಯೆಂದು ನುವಿಸ್ ತಿಳಿಸುತ್ತಾನಲ್ಲದೆ, ರಾಜಾಜ್ಞೆಗಳನ್ನು ಅರಗಿನಿಂದ ಮುದ್ರೆಯೊತ್ತಿ ದೃಢೀಕರಿ ಸುತ್ತಿದ್ದನೆಂದು ತಿಳಿಸಿದ್ದಾನೆ. ಇಲ್ಲಿನ ಕಾರಕೂನರನ್ನು "ರಾಯಸದವರು" ಎಂದು ಕರೆಯಲಾಗುತ್ತಿತ್ತು.

**ಪ್ರಾಂತ (ಮಂಡಲ)** : (ನರಸಿಂಹನ ರಾಜ್ಯದಲ್ಲಿ ಐದು ಪ್ರಾಂತಗಳಿವೆ" ಎಂದು ಬರ್ಬೋಸಾ ಹೇಳಿದ್ದಾನೆ. ಡಾ॥ ಮಹಾಲಿಂಗಂ ಅವರು ಒಂಬತ್ತು "ರಾಜ್ಯ" (ಮಂಡಲ) ಗಳ ಪಟ್ಟಿ ಮಾಡಿದ್ದಾರೆ. ಅವು ಯಾವುವೆಂದರೆ :— (1) ಉದಯಗಿರಿ (2) ಪೆನುಗೊಂಡ (3) ಚಂದ್ರಗಿರಿ (4) ಪಡೈವೀಡು (5) ತಿರುವಾದಿ (ತಿರುವಾಂಕೂರು) (6) ಮುಳುವಾಯಿ (ಮುಳಬಾಗಿಲು) (7) ಸಾಂತಳಿಗೆ (ಶಿವಮೊಗ್ಗ ಪ್ರದೇಶ) (8) ಅರಗ (9) ಮಂಗಳೂರು. ಆದರೆ ಇದಕ್ಕೂ ಹೆಚ್ಚು ರಾಜ್ಯಗಳು ಕೆಲವೊಮ್ಮೆ ಇದ್ದುದಿದೆಯೆಂದೂ ಅವರು ಹೇಳಿದ್ದಾರೆ. ಸಂಗಮರ ಆರಂಭದ ಕಾಲದಲ್ಲಿ ಗೋವೆಯ ಕೇಂದ್ರವಾಗಿರುವ ಕೊಂಕಣ ಪ್ರಾಂತ್ಯವೂ ಇತ್ತು.

ರಾಜ್ಯಗಳ ಗಾತ್ರ ಸಮಾನವಾಗಿರಲಿಲ್ಲ. ಈ ರಾಜ್ಯಗಳ ಮೇಲೆ ಒಬ್ಬ ಸಮರ್ಥ ಅಧಿಕಾರಿ ಇರುತ್ತಿದ್ದ. ರಾಜವಂಶಜರೂ ಕೆಲವೊಮ್ಮೆ ರಾಜಾಧಿ ಕಾರಿಗಳಾಗಿರುತ್ತಿದ್ದರು. ಹರಿಹರನ ಸೋದರ ಕಂಪಣ ಅರಗ ರಾಜ್ಯವನ್ನು ನೋಡಿಕೊಳ್ಳುತ್ತಿದ್ದ ; ಬುಕ್ಕನ ಮಗ ಕಂಪಣ ಮುಳವಾಯಿ ರಾಜ್ಯ

ವನ್ನು ಆಳುತ್ತಿದ್ದ.

ಈ ಅಧಿಕಾರಿಗಳನ್ನು ಸ್ಥಳದಿಂದ ಸ್ಥಳಕ್ಕೆ ವರ್ಗಾಯಿಸುವುದಿತ್ತು: ವಂಶ ಪಾರಂಪರಿಕವಾಗಿ ಅಧಿಕಾರ ನೀಡುವುದು ರೂಢಿಯಲ್ಲಿತ್ತು. ಈ ಅಧಿಕಾರಿ ಗಳನ್ನು 'ದಂಡನಾಯಕ' 'ದಣಾಯಕ' 'ಒಡೆಯ' ಎಂದೇ ಕರೆಯಲಾಗಿದೆ. ಬ್ರಾಹ್ಮಣರನ್ನೂ ಈ ಸ್ಥಾನಕ್ಕೆ ನೇಮಿಸುತ್ತಿದ್ದರು. ರಾಮರಾಯನು ಬಾರ ಕೂರಲ್ಲಿ ಏಕದಿಲಖಾನ್, ಗುಂಡ್ಲುಪೇಟೆ ಪ್ರದೇಶದಲ್ಲಿ ರುಸ್ತುಂಜಿಖಾನ್ ಹಾಗೂ ಮುಂದೆ ದಿವಾನ್‌ಖಾನ್ ಎಂಬ ಮುಸಲ್ಮಾನ ಅಧಿಕಾರಿಗಳನ್ನು ನೇಮಿಸಿದ್ದ.

ಈ ರಾಜ್ಯಾಧಿಕಾರಿಗಳು ಕಂದಾಯ ಸಂಗ್ರಹ, ನ್ಯಾಯದಾನಗಳನ್ನು ನಿರ್ವಹಿಸುತ್ತಿದ್ದರು. ಅವನ ಕೈಯಲ್ಲಿ ಸೈನ್ಯವಿರುತ್ತಿತ್ತು.

'ರಾಜ್ಯ'ವನ್ನು 'ವಿಷಯ' ಅಥವಾ 'ವೇಂಟೆ' (ಪೇಟೆ) ಅಥವಾ 'ಕೊಟ್ಟಂ' (ತಮಿಳುನಾಡಿನಲ್ಲಿ) ಎಂದು ವಿಭಜಿಸಲಾಗಿತ್ತು. ಇದನ್ನು ಇಂದಿನ ಜಿಲ್ಲೆಗಳಲ್ಲಿ ಹೋಲಿಸಬಹುದು. ಈ ಜಿಲ್ಲೆಗಳನ್ನು 'ಸೀಮೆ' ಅಥವಾ 'ನಾಡು' ಗಳಾಗಿ ವಿಭಜಿಸಿದ್ದರು. ಕೆಲವು ಗ್ರಾಮಗಳ ಗುಂಪಾದ 'ಸ್ಥಳ' ಅಥವಾ 'ಕಂಕಣ' ಸೀಮೆಗಿಂತ ಕಿರಿಯ ಘಟಕವಾಗಿತ್ತು.

ಪ್ರತಿಯೊಂದು ಗ್ರಾಮದಲ್ಲಿ ಗೌಡ ಮತ್ತು ಕರಣಿಕರಿದ್ದರೂ ಅವರ ಮೇಲೆ ಸಾಮ್ರಾಜ್ಯದ ಪ್ರತಿನಿಧಿಯಾದ 'ಅಧಿಕಾರಿ' ಕಂಪಣಕ್ಕೊಬ್ಬನಂತೆ ಇದ್ದ. ಆದರೆ ಈ ಅಧಿಕಾರಿಯು ಪ್ರತಿನಿಧಿಗಳಾಗಿ ಇವರು (ಸ್ಥಾನೀಯ ಮಟ್ಟದಲ್ಲಿ) ಕೆಲವು ದೊಡ್ಡ ಪಟ್ಟಣಗಳಿಗೆ ಪಟ್ಟಣಕ್ಕೊಬ್ಬರಂತೆ, ಅಥವಾ ಕೆಲವು ಗ್ರಾಮಗಳ ಗುಂಪಿಗೆ ಒಬ್ಬರಂತೆ ಇದ್ದರು.

ಆದರೆ ಪರಂಪರಾಗತವಾಗಿ ಆಳಿ ಬಂದ ಸ್ಥಾನೀಯ ದೊರೆಗಳು ಅಥವಾ ಪಾಳೆಯಗಾರರನ್ನೂ ವಿಜಯನಗರದ ದೊರೆಗಳು ಮುಂದುವರಿಯಗೊಟ್ಟರು. ತಿರುವಾಂಕೂರು, ಪಾಂಡ್ಯ, ಸಾಂತರ, ಸಾಳುವ (ಗೇರುಸೊಪ್ಪೆ) ಮುಂತಾದ ರಾಜರು ಸಾಮ್ರಾಟರಿಗೆ ವಿಧೇಯರಾಗಿ ತಮ್ಮ ಆಳ್ವಿಕೆ ಮುಂದುವರೆಸಿದರು. ಕೆಲವೆಡೆ ಸಮರ್ಥ ಸೇನಾನಿಗಳಿಗೆ ಕೆಲವೊಂದು ಸ್ಥಳಗಳನ್ನು ವಂಶಪಾರಂಪರಿಕ ವಾಗಿ ಆಳಲು ಬಿಟ್ಟುಕೊಟ್ಟುದೂ ಇದೆ. (ಉದಾ : ಕೆಳದಿ, ಮಧುರೆ) ಐರೋಪ್ಯ ದೇಶಗಳಲ್ಲಿದ್ದಂತೆ ಸರಂಜಾಮು ಶಾಹಿ (ಊಳಿಗ ಮಾನ್ಯ ಪದ್ಧತಿ) ಯೂ ಕೆಲವು ಮಟ್ಟಿಗೆ ಆಡಳಿತದಲ್ಲಿ ಇತ್ತು. ಆದರೂ ಈ ಪಾಳೆಯಗಾರ

ಥವಾ ಸ್ಥಾನೀಯ ದೊರೆಗಳ ಕ್ಷೇತ್ರದಲ್ಲಿ ಸಾಮ್ರಾಜ್ಯದ ಅಧಿಕಾರಿಗಳೂ ಇರುತ್ತಿದ್ದರು. ಅವರು ಈ ಸ್ಥಾನೀಯ ಪಾಳಯಗಾರರ ಮೇಲೆ ಪೂರ್ಣಾಧಿಕಾರ ಹೊಂದಿದ್ದರು. ಸಾಮ್ರಾಜ್ಯದ ಅಧಿಕಾರ ವಿಠ್ಠರಸ ಒಡೆಯನು ತನ್ನ ಮೇಲಣ ಅಧಿಕಾರಿಯೆಂದು ಮಧುರೆಯ ವಿಶ್ವನಾಥನಾಯಕ ಹೇಳಿಕೊಂಡಿದ್ದಾನೆ. ಹೇಗಿದ್ದರೂ ಆಡಳಿತವನ್ನು ವಿಕೇಂದ್ರಿಕರಣಗೊಳಿಸಿದ್ದರಿಂದ ಅನೇಕ ಪಾಳಯಗಾರರು ಸಾಮ್ರಾಜ್ಯದ ಮಾಂಡಳಿಕರಾಗಿ ಆಳಲು ಆರಂಭಿಸಿದರು.

**ಸ್ಥಳೀಯ ಆಡಳಿತ :** ಗ್ರಾಮಗಳಲ್ಲಿ 'ಗೌಡ' ಎಂಬ ಪ್ರಮುಖ, 'ಕರಣಿಕ' ಅಥವಾ 'ಕರ್ಣಂ' (ಶಾನುಬೋಗ) ಎಂಬ ಲೆಕ್ಕಿಗ ಮತ್ತು 'ಕಾವಲು' ಅಥವಾ 'ತಳವಾರ' ಎಂಬ ಕಾಪಿನವನು ಇರುತ್ತಿದ್ದರು. ಮತ್ತು ಸಂಗ್ರಹ ಮುಂತಾದ ಕಾರ್ಯಗಳನ್ನು ಇವರು ನೋಡಿಕೊಳ್ಳುತ್ತಿದ್ದರು. ದೊಡ್ಡ ಗ್ರಾಮ ಅಥವಾ ಪಟ್ಟಣಗಳಲ್ಲಿ 'ಅಧಿಕಾರಿ' ಎಂಬ ಸಾಮ್ರಾಜ್ಯದ ಪ್ರತಿನಿಧಿ ಇರುತ್ತಿದ್ದ.

ಪ್ರತಿ ಊರಿನಲ್ಲಿ ಪ್ರಾಚೀನಕಾಲದಿಂದ ನಡೆದುಕೊಂಡು ಬಂದ ಸ್ಥಳೀಯ ಸಮಿತಿ ಅಥವಾ ಪ್ರಾತಿನಿಧಿಕ ಮಂಡಳಿಗಳು ಮುಂದುವರಿದು ಸಾಮಾಜಿಕ ಹಾಗೂ ನ್ಯಾಯದಾನಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದವು. ಸಾಮ್ರಾಜ್ಯದ ಅಧಿಕಾರಿ ಅವುಗಳನ್ನು ವಿಚಾರಿಸದೇ ಯಾವುದೇ ಸ್ಥಾನೀಯ ಸ್ವರೂಪದ ನಿರ್ಣಯ ನೀಡುತ್ತಿರಲಿಲ್ಲ.

**ರಾಜಾದಾಯ :** ಭೂಕಂದಾಯವು ರಾಜಾದಾಯದ ಪ್ರಮುಖವಾಗಿತ್ತು. ಒಂದು ಭೂಮಿಯ ಒಟ್ಟು ಉತ್ಪನ್ನದ ಸುಮಾರು ಆರನೇಯ ಒಂದರಷ್ಟನ್ನು ಕಂದಾಯವಾಗಿ ಸಂಗ್ರಹಿಸಿ, ಅದರಿಂದ ದೇವಾಲಯಗಳಿಗೆ ನೀಡುತ್ತಿದ್ದ ರಾಜ್ಯದ ಕಾಣಿಕೆಗಳನ್ನು ಸಲ್ಲಿಸಲಾಗುತ್ತಿತ್ತು. ಭೂಮಿಯ ಮೇಲೆ ಗುರುತಿಸಲು 'ವಾಮನ ಮುದ್ರೆಯ ಕಲ್ಲು' ಎಂಬ ಬಾಂದಕಲ್ಲು ಇರುತ್ತಿತ್ತು. ಭೂಮಿಯನ್ನು ಅಳೆಯಲು "ರಾಜವಿಭಾಡನ ಕೋಲು", "ಗಂಡರಗಂಡನ ಕೋಲು" ಮುಂತಾದ ಮಾನದಂಡಗಳ ಉಲ್ಲೇಖ ಶಾಸನಗಳಲ್ಲಿದೆ. ಕ್ಷಾಮಗಳು ಬಂದಾಗ ಕಂದಾಯದಲ್ಲಿ ರಿಯಾಯಿತಿ ತೋರಿಸಲಾಗುತ್ತಿತ್ತು.

ಆಸ್ತಿಪಾಸ್ತಿಗಳ ಮೇಲೆ 'ಅಂಗಡಿದೆರೆ', 'ಮನೆದೆರೆ' ಇರುತ್ತಿತ್ತು. ವೃತ್ತಿದೆರಿಗೆಗಳಾದ 'ಗಾಣದೆರೆ' 'ಮಗ್ಗದೆರೆ' 'ಸೂಳೆದೆರೆ' ಇತ್ಯಾದಿ ಪ್ರಚಲಿತವಾಗಿದ್ದವು.

ವ್ಯಾಪಾರಮಾಡುವ ಅಥವಾ ಸ್ಥಳದಿಂದ ಸ್ಥಳಕ್ಕೆ ಒಯ್ಯುವ ವಸ್ತುಗಳ ಮೇಲ ಸುಂಕ ಸಂಗ್ರಹಿಸಲಾಗುತ್ತಿತ್ತು. ಈ ಸುಂಕದ ಸಂಗ್ರಹ ವ್ಯವಸ್ಥೆಗೆ ಇಡೀ ಸಾಮ್ರಾಜಕ್ಕೆ "ಪೃಥ್ವೀಶೆಟ್ಟಿ" ಎಂಬ ಅಧಿಕಾರಿ ಇದ್ದ. ಆಹಾರಧಾನ್ಯ, ಪ್ರಾಣಿಗಳು, ವಾಹನಗಳು, ಸೇವಕರು ಮುಂತಾದ ಎಲ್ಲ ವಸ್ತುಗಳ ಮೇಲೆ ಸುಂಕವಿತ್ತು.

ಉಪ್ಪಿನ ಕಳ, ಹೆಂಡ ಇಳಿಸುವ ತಾಳೆ, ಅಡವಿಗಳು, ಹುಲ್ಲುಗಾವಲು ಇವುಗಳ ಮೇಲೂ ತೆರಿಗೆ ಹೇರಲಾಗುತ್ತಿತ್ತು. ಮದುವೆಗೂ ತೆರಿಗೆ ಇತ್ತು. ಆದರೆ ಕೃಷ್ಣದೇವರಾಯನು ಇದನ್ನು ಕಿತ್ತುಹಾಕಿದ.

**ಸೇನೆ :** ರಾಜನು ಸ್ವತಃ ಭರ್ತಿಮಾಡುವ ಕಾಯಂ ಸೇನೆ, ಮತ್ತು ಸ್ಥಾನೀಯ ಪಾಳಯಗಾರರು ಕಳಿಹಿಸುವ ದಳ, ಹೀಗೆ ಸೇನೆಯಲ್ಲಿ ಎರಡು ವಿಭಾಗವಿತ್ತು. ಸೇನಾ ರಾಜ್ಯವಾದ ವಿಜಯನಗರ ವಿಶಾಲವಾದ ಸೇನೆಯನ್ನು ಹೊಂದಿದ್ದು, ಅದರ ಸೇನಾಬಲ ಹತ್ತರಿಂದ ಇಪ್ಪತ್ತು ಲಕ್ಷದವರೆಗೆ ಇತ್ತು. ಕಾಲುದಳ, ಅಶ್ವದಳ ಮತ್ತು ಗಜದಳ ಜೊತೆ ಸೇನೆಯಲ್ಲಿ ತೋಪುದಳವೂ ಇತ್ತು. "ನಾವಿಗದ ಪ್ರಭು" ಎಂಬ ನೌಕಾಧಿಕಾರಿಯ ಹೆಸರು ಶಾಸನವೊಂದ ರಲ್ಲಿದೆ. ಪ್ರಾಂತಗಳ ಮುಖ್ಯ ಕೇಂದ್ರಗಳಲ್ಲಿ ಭದ್ರವಾದ ಕೋಟೆಗಳಿದ್ದವು. ಚಿತ್ರದುರ್ಗ, ಬೆಂಗಳೂರು, ಮೈಸೂರು, ಕೆಳದಿ ಮುಂತಾದ ಕಡೆಯ ಪಾಳೆಯಗಾರರಿಗೆ ಕೋಟೆಗಳನ್ನು ಕಟ್ಟಿಕೊಳ್ಳಲು ಅನುಮತಿ ನೀಡಲಾಗಿತ್ತು.

ಸೇನೆಯ ಠಾಣ್ಯವು ಒಂದು ನಗರವನ್ನೇ ಹೋಲುತ್ತಿತ್ತು. ಒಂದೆಡೆ ತಳಬಿಟ್ಟ ಸೇನೆಗೆ ಸೇವೆ ಸಲ್ಲಿಸಲು ಸಾಲು ಸಾಲು ಅಂಗಡಿಗಳು ಇರುತ್ತಿದ್ದವು. ಸೇನೆಯಲ್ಲಿ ಭಾರಿ ಗಾತ್ರದ ರಣವಾದಕರ ತಂಡವಿತ್ತು.

ನವರಾತ್ರಿಯ ದಿನ ಸಾಮ್ರಾಜ್ಯದ ಸೇನೆಯ ಪರಿಯವೇಕ್ಷಣೆಯು ಸ್ವಯಂ ಸಮ್ರಾಟನಿಂದಲೇ ರಾಜಧಾನಿಯಲ್ಲಿ ನಡೆಯುತ್ತಿತ್ತು. ಸಾಮ್ರಾಜ್ಯದ ಬಹುಪಾಲು ಸೇನೆ ನವರಾತ್ರಿಯ ಕಾಲಕ್ಕೆ ರಾಜಧಾನಿಗೆ ಬರುತ್ತಿತ್ತು. ಆ ಸೇನೆಯ ಬಾಹುಳ್ಯ, ವಿಸ್ತಾರವನ್ನು ಕಂಡು ಪಾಯೆಸ್, 'ನಾನು ಅದನ್ನು ವರ್ಣಿಸಲು ಅಸಮರ್ಥ' ಎಂದಿದ್ದಾನೆ.

## ೬. ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ

**ಧರ್ಮ** : ಹಿಂದೂ ಧರ್ಮದ ರಕ್ಷಣೆಗಾಗಿ ಸ್ಥಾಪಿತವಾದ ವಿಜಯ ನಗರದ ದೊರೆಗಳು "ಹಿಂದುರಾಯ ಸುರತ್ರಾಣ", "ಗೋಬ್ರಾಹ್ಮಣ ಪ್ರತಿ ಪಾಲನಾಚಾರ್ಯ", "ಹಿಂದೂ ಧರ್ಮ ಪ್ರತಿಷ್ಠಾಪನಾಚಾರ್ಯ" "ವೈದಿಕ ಮಾರ್ಗಸಂಸ್ಥಾಪನಾಚಾರ್ಯ" ಮುಂತಾದ ಬಿರುದುಗಳನ್ನು ಧರಿಸಿದ್ದರು. ಭಾರತೀಯ ಧರ್ಮ, ಸಂಸ್ಕೃತಿಗಳಿಗೆ ಸಂಬಂಧಿಸಿದ ಎಲ್ಲ ವಿವಿಧ ಚಟುವಟಿಕೆಗೂ ಅವರು ಅಪಾರ ಪ್ರೋತ್ಸಾಹ ನೀಡಿದರು.

ಯಾವ ಧರ್ಮ, ಸಂಪ್ರದಾಯದ ಬಗೆಗೂ ಸಾಮ್ರಾಟರು ಪಕ್ಷಪಾತ ಮಾಡಲಿಲ್ಲ ಪಶ್ಚಿಮದ ಧರ್ಮಗಳಾದ ಇಸ್ಲಾಂ, ಕ್ರಿಶ್ಚನ್‌ಗಳ ಬಗೆಗೂ ಅವರು ಆದರ ತಳೆದಿದ್ದರು.

ಸಂಗಮ ವಂಶದ ದೊರೆಗಳು ಕಾಲಾಮುಖ ಸಂಪ್ರದಾಯದವರಾಗಿದ್ದರು: ಕ್ರಿಯಾಸಕ್ತಿ ಆಚಾರ್ಯರು ಸಂಗಮ ಸೋದರರ ಗುರುಗಳು : ಆದರೆ ಶೃಂಗೇರಿ ಪೀಠದ ಬಗೆಗೆ ಅವರಿಗೆ ಅಪಾರ ಭಕ್ತಿ. ಆದರೆ ಸಂಗಮರು ವಿಜಯ ನಗರ ಸಾಮ್ರಾಜ್ಯಕ್ಕಾಗಿ ಸ್ವೀಕರಿಸಿದ ಚಿಹ್ನೆ ವೈಷ್ಣವ ಲಾಂಛನವಾದ ವರಾಹ (ಚಾಳುಕ್ಯರದೂ ಇದೇ ಲಾಂಛನವಾಗಿತ್ತು). ಇರುಗಪ್ಪ ದಂಡನಾಯಕನೆಂಬ ಸಂಗಮರ ಸೇನೆಯಲ್ಲಿದ್ದ ಸೇನಾನಿ ಜೈನನಾಗಿದ್ದು ರಾಜಧಾನಿಯಲ್ಲಿ ಬಸದಿಯನ್ನು ಕಟ್ಟಿಸಿದ್ದಾನೆ ಪ್ರೌಢ ದೇವರಾಯನ ಪ್ರಿಯ ಸೇನಾನಿ ಲಕ್ಷಣ ವೀರಶೈವನಾಗಿದ್ದ : ತುಳುವ ವಂಶದ ದೊರೆಗಳು ಶ್ರೀ ವೈಷ್ಣವರು. ಆದರೆ ಕೃಷ್ಣದೇವರಾಯನು "ವಿರೂಪಾಕ್ಷ ಪಾದಪದ್ಮಾರಾಧಕ"ನಾಗಿದ್ದ. ಮಾಧ್ವ ಸಂನ್ಯಾಸಿ ವ್ಯಾಸತೀರ್ಥರ ಪ್ರಿಯ ಭಕ್ತನೂ ಆಗಿದ್ದ. ಎರಡನೆಯ ದೇವರಾಯ ರಾಜಧಾನಿಯಲ್ಲಿ ಮುಸಲ್ಮಾನರಿಗೆ ಮಸೀದಿಯೊಂದನ್ನು ಕಟ್ಟಿಸಿಕೊಟ್ಟಿದ್ದ. ಅರವೀಡು ಎರಡನೆಯ ವೆಂಕಟನ ಆಸ್ಥಾನಕ್ಕೆ ಬಂದಿದ್ದ ಕ್ರೈಸ್ತಪಾದ್ರಿಗಳು

ಅವನಿಂದ ಎಷ್ಟು ಗೌರವೀತರಾದರೆಂದರೆ, ಆತನನ್ನು ತಾವು ಶೀಘ್ರ ತವ ಧರ್ಮಕ್ಕೆ ಮತಾಂತರಿಸುವುದಾಗಿ ಅವರು ನಂಬಿದ್ದರು.

ಶೈವ, ವೀರಶೈವ, ಮಾಧ್ವ, ಜೈನ, ಶ್ರೀ ವೈಷ್ಣವ ಸಂಪ್ರದಾಯಗಳೆಲ್ಲ ಆ ಕಾಲದಲ್ಲಿ ಜನಪ್ರಿಯವಾಗಿದ್ದವು. ಉದಾರ ರಾಜಾಶ್ರಯ, ಜನಾಶ್ರಯ ಪಡೆದುವು. ಎಲ್ಲ ಸಂಪ್ರದಾಯಗಳ ಮಠ, ಮಂದಿರಗಳಿಗೆ ಸಾಮ್ರಾಟರ ಅಪಾರ ಕಾಣಿಕೆ ನೀಡಿದರು. ಸಾಮ್ರಾಜ್ಯದ ನೂರಾರು ಶಾಸನಗಳೇ ಇದಕ್ಕೆ ಸಾಕ್ಷಿ.

ದೇವಾಲಯ, ಮಠಗಳಲ್ಲಿ ಭಾರಿ ಪ್ರಮಾಣದ ಉತ್ಸವ, ಜಾತ್ರೆಗಳು ನಡೆಯುತ್ತಿದ್ದವು. ಈ ಉತ್ಸವಗಳಿಗಾಗಿ ವಿಶಾಲ ಕಲ್ಯಾಣ ಮಂಟಪಗಳನ್ನು ಸಾಮ್ರಾಟರು ಎಲ್ಲ ದೇವಾಲಯಗಳಿಗೆ ಕಟ್ಟಿಸಿಕೊಟ್ಟರು.

ಜೈನ-ಶ್ರೀ ವೈಷ್ಣವರಲ್ಲಿ ನಡೆದ ಜಗಳವನ್ನು ಬುಕ್ಕರಾಯನು ಪರಿಹರಿಸಿದ ಸಂಗತಿ. ಬೇಲೂರಿನಲ್ಲಿರುವ ಶಾಸನದ "ಯಂಶೈವಾಸ್ಸಮುಪಾಸತೆ— ಶ್ಲೋಕ, ಸಾಮ್ರಾಜ್ಯದಲ್ಲಿನ ಸಹಿಷ್ಣುತೆಗೆಸಾಕ್ಷಿ 'ಕ್ರೈಸ್ತನೇ, ಯಹೂದಿಯೇ, ಮಹಮ್ಮದೀಯನೇ ಅಥವಾ ಹಿಂದೂವೇ ಯಾರಾದರೂ ನಿರಾಂತಂಕವಾಗಿ ಈ ರಾಜ್ಯದಲ್ಲಿ ಬಾಳಬಹುದು" ಎಂದು ಬರ್ಬೋಸಾ ಸಹಿಷ್ಣುತೆಗೆ ಸಾಕ್ಷ್ಯ ನೀಡಿದ್ದಾನೆ.

ಬುಕ್ಕ ಮತ್ತು ಎರಡನೆಯ ಹರಿಹರರ ನೆರವಿನಿಂದ ಸಾಯಣ, ವಿದ್ಯಾರಣ್ಯರು ನಡೆಸಿದ ವೈದಿಕ ಭಾಷ್ಯ ರಚನೆಯ ಬೃಹತ್ ಕಾರ್ಯ ("ವೇದಾರ್ಥ ಪ್ರಕಾಶ") ಹಾಗೂ ಪ್ರೌಢದೇವರಾಯನ ಕಾಲದಲ್ಲಿ ವೀರಶೈವರು ನಡೆಸಿದ ವಚನಗಳ ಸಂಗ್ರಹದ ಘನ ಸಾಧನೆ ಧಾರ್ಮಿಕ ಚಟುವಟಿಕೆಯ ಹೆಚ್ಚಳಕ್ಕೆ ಸಾಕ್ಷಿ. ಕಲ್ಮಠದ ಪ್ರಭುದೇವರಂಥ ಅನೇಕ ವೀರಶೈವ ಗಣ್ಯರೂ ರಾಜಧಾನಿಯಲ್ಲಿ ಇದ್ದರು. ಹದಿನಾರನೆಯ ಶತಮಾನ ಮಾಧ್ವ ಸಂಪ್ರದಾಯದಲ್ಲಿನ ದಾಸಪಂಥದ ಬೆಳವಣಿಗೆಯ ಅವಧಿ. ವ್ಯಾಸತೀರ್ಥರು, ಕನಕ, ಪುರಂದರರು ಹಂಪೆಯಲ್ಲೂ ಇದ್ದ ವ್ಯಕ್ತಿಗಳು.

ನವರಾತ್ರಿ, ದೀಪಾವಳಿ, ಹೋಳಿ ಮುಂತಾದ ಉತ್ಸವಗಳನ್ನು ಸಾರ್ವಜನಿಕವಾಗಿ ಉತ್ಸಾಹದಿಂದ ಆಗ ಆಚರಿಸುತ್ತಿದ್ದರು: ಪಾಯೆಸ್, ನುವಿಸ್, ಅಬ್ದುಲ್ ರಜಾಕ್ ಮುಂತಾದವರು ನವರಾತ್ರಿಯ ಉತ್ಸವದ ಒಂಬತ್ತು ದಿನಗಳ ಕಾರ್ಯಕ್ರಮದ ವೈಭವದ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ ನೀಡಿ

ದ್ದಾರೆ. ದಿನವಿಡೀ ರಾಜಧಾನಿಯಲ್ಲಿ ಆಗ ಕುಸ್ತಿ (ಮಲ್ಲಯುದ್ಧ) ಹಾಗೂ ನರ್ತನ ಕಾರ್ಯಕ್ರಮಗಳು ನಡೆಯುತ್ತಿದ್ದುವೆಂದು ಅವರು ತಿಳಿಸಿದ್ದಾರೆ. ಪೂಜಾ ಕಾರ್ಯಕ್ರಮ, ಪ್ರಾಣಿ ಬಲಿ ಮುಂತಾದವುಗಳ ವಿವರ ಬಣ್ಣನೆ ನಮಗೆ ಅವರ ಬರವಣಿಗೆಯಲ್ಲಿ ಕಾಣಸಿಗುತ್ತದೆ.

**ಸಾಮಾಜಿಕ ಜೀವನ:** ಸಮಾಜದಲ್ಲಿ ಚಾತುರ್ವರ್ಣ್ಯಗಳ ಜೊತೆ ಅಸಂಖ್ಯ ಜಾತಿ-ಉಪಜಾತಿಗಳು ಮಧ್ಯಯುಗದ ಭಾರತದಲ್ಲಿ ಕಂಡುಬರುವಂತೆ ವಿಜಯನಗರದಲ್ಲೂ ಇದ್ದವು. ಜಾತಿಭೇದ, ವರ್ಣಭೇದ, ಅಸ್ಪೃಶ್ಯತೆಗಳು ರೂಢಿಯಲ್ಲಿದ್ದವು. ಆದರೆ ಎಲ್ಲ ಜಾತಿಯವರಿಗೂ ಸೈನ್ಯಕ್ಕೆ ಸೇರಿ ಪರಾಕ್ರಮ ತೋರಿ ದತ್ತಿ, ಗೌರವ ಪಡೆಯಲು ಅವಕಾಶ ಇತ್ತು. ಹೀಗೆ ಮುಂದೆ ಬಂದ ವರೇ ಮುಂದೆ ಪಾಳಯಗಾರರಾದರು ಇವರಲ್ಲಿ ಬೇಡ, ಒಕ್ಕಲಿಗ ಜಾತಿ ಯವರೂ ಇದ್ದರು ಅಸ್ಪೃಶ್ಯ ಜಾತಿಯವರನ್ನೂ ಸೈನ್ಯದಲ್ಲಿ ಸೇರಿಸಿಕೊಳ್ಳು ತ್ತಿದ್ದರು. ಸ್ಥಾನೀಯ ಸಮಿತಿಗಳಲ್ಲಿ ಎಲ್ಲ ಜಾತಿಯ ಪ್ರತಿನಿಧಿಗಳು ಇರುತ್ತಿ ದ್ದರು. ಪಶ್ಚಿಮ ಕರಾವಳಿಯಲ್ಲಿ ಆಗಲೇ ಅಸ್ತಿತ್ವದಲ್ಲಿದ್ದ ಮುಸಲ್ಮಾನರ ಪ್ರತಿ ನಿಧಿಗಳಿಗೆ ಕರಾವಳಿಯ ಊರುಗಳ ಸಮಿತಿಯಲ್ಲಿ ಸ್ಥಾನವಿತ್ತು. "ಹಂಜಮಾನ ದವರು" ಎಂಬುದಾಗಿ ಅವರನ್ನು ಮಂಗಳೂರು, ಬಾರಕೂರು ಮುಂತಾ ದೆಡೆಯ ಶಾಸನಗಳು ಕರೆದಿವೆ.

ಕ್ಷತ್ರಿಯರು ಬಹುಪತ್ನಿತ್ವವನ್ನು ಅನುಸರಿಸುತ್ತಿದ್ದರು; ಬ್ರಾಹ್ಮಣರೂ ವೀರಶೈವರೂ ಏಕ ಪತ್ನಿತ್ವವನ್ನು ಪಾಲಿಸುವವರು ಎಂದು ಬರ್ಬೋಸ ಹೇಳಿ ದ್ದಾನೆ. ಆದರೆ ಬಹುಪತ್ನಿತ್ವವು ಎಲ್ಲ ಜಾತಿಗಳಲ್ಲಿ ಆಗ ರೂಢಿಯಲ್ಲಿತ್ತು. ಆದರೆ ಸಾರ್ವತ್ರಿಕವಾಗಿರಲಿಲ್ಲ. ಕನ್ಯಾಶುಲ್ಕವು (ತೆರ) ರೂಢಿಯಲ್ಲಿದ್ದು ವಿಚಾರವಂತರು ಅದನ್ನು ವಿರೋಧಿಸಿದರು.

ಪತಿ ಸತ್ತಾಗ ಪತ್ನಿಯರು ಸಹಗಮನ ಮಾಡಿದ ಉದಾಹರಣೆಗಳುಂಟು. ಸ್ತ್ರೀಯರು ಗೃಹಿಣಿಯರಾಗಿಯೇ ಬಾಳುತ್ತಿದ್ದರು. ಆದರೆ ಅರಮನೆಯಲ್ಲಿ ಕರ ಣಿಕ ವೃತ್ತಿ, ಕಾಪಿನ ಭಟರ ವೃತ್ತಿಗಳನ್ನು ಅವರು ಮಾಡುತ್ತಿದ್ದರು. ನರ್ತನ ಸಂಗೀತಗಳಲ್ಲಿ ಪರಿಣತ ಪಡೆದ ಸ್ತ್ರೀಯರು ಅಪಾರ ಸಂಖ್ಯೆಯಲ್ಲಿದ್ದರು ಗಂಗಾ ಬಿಕೆ, ತಿರುಮಲಾಂಬೆಯರಂಥ ಕವಯಿತ್ರಿಯರೂ ಇದ್ದರು. ವ್ಯಾಪಾರಾದಿ ಗಳನ್ನು ನಡೆಸುತ್ತಿದ್ದ ಸ್ತ್ರೀಯರೂ ಇದ್ದರು.

ನರ್ತನ,ದೇವದಾಸಿ ಪದ್ಧತಿಗಳಿಗೆ ದೊರೆತ ಪ್ರೋತ್ಸಾಹದ ಜೊತೆ ವೇಶ್ಯಾ ವ್ಯವಸಾಯವು ಸಾಮ್ರಾಜ್ಯದಲ್ಲಿ ಸಮೃದ್ಧಿಯನ್ನು ಪಡೆದಿತ್ತು. ವಿಜಯ

ನಗರದ ಸೂಳೆಕೇರಿಯನ್ನು ವಿದೇಶೀಯ ಪ್ರವಾಸಿಗರೂ ಸಮಕಾಲೀನ ಕನ್ನಡ ಕವಿಗಳೂ ಮನಸ್ವಿಯಾಗಿ ವರ್ಣಿಸಿದ್ದಾರೆ. ರಾಜಧಾನಿಯಲ್ಲಿ ಆರಕ್ಷಕ ಪಡೆಯ ವೆಚ್ಚ ಅಲ್ಲಿ ಸಂಗ್ರಹವಾದ ಸೂಳೆದೆರೆ ಅಥವಾ ತೆರೆಗೆಯಿಂದಲೇ ನಿಭಾಯಿಸಲ್ಪಡುತ್ತಿತ್ತು.

ವಿಜಯನಗರದ ಜನ ರಸಜ್ಞರು : "ರಾಯರ ಕಾಲದ ರಸಿಕತೆ" ಖ್ಯಾತವಾದುದು. ಗಂಡಸರೂ ಹೆಂಗರೂ ಮಲ್ಲಿಗೆಯಂಥ ಸುವಾಸನೆಯ ಹೂಗಳ ಮಾಲೆಗಳನ್ನು ಕೊರಳಲ್ಲೂ ಶಿರದಲ್ಲೂ ಧರಿಸುತ್ತಿದ್ದರು ಅಂಗಾಂಗಗಳಿಗೆ ಶ್ರೀಗಂಧವನ್ನೂ ಸುಗಂಧ ದ್ರವ್ಯಗಳನ್ನೂ ಪೂಸಿಕೊಳ್ಳುತ್ತಿದ್ದರು. ಸಂಗೀತ, ನೃತ್ಯ, ಸಾಹಿತ್ಯಗಳಲ್ಲಿ ಆಸ್ಥೆಯುಳ್ಳವರಾಗಿದ್ದರು. ವೀಳಯವನ್ನು ಮೆಲ್ಲುವುದು ಸಾರ್ವತ್ರಿಕ ಹವ್ಯಾಸವಾಗಿತ್ತು.

ರೇಷ್ಮೆಯ, ಹತ್ತಿಯ ಬಟ್ಟೆಗಳನ್ನು ಇಂದಿನಂತೆ ಅಂದೂ ತೊಡುತ್ತಿದ್ದರು. ಪುರುಷರು ಬಣ್ಣ ಬಣ್ಣದ ಎತ್ತರದ ಕುಲಾವಿ ಹಾಕಿಕೊಳ್ಳುತ್ತಿದ್ದರು. ಕೈ ಕಾಲಲ್ಲಿ ಕಡಗ, ಕಂಠಹಾರ, ಕಿವಿಮುರಿವು, ಉಂಗುರಾದಿ ಆಭರಣಗನ್ನು ತೊಡುತ್ತಿದ್ದರು. ಸ್ತ್ರೀಯರೂ ಕಡಗ, ಒಡ್ಯಾಣ, ಬಳೆಗಳು, ವಂಕಿ, ಕಂಠಿಗಳು, ಮೂಗುತಿ, ಶಿರಾಭರಣಗಳಿಂದ ಅಲಂಕೃತವಾಗಿರುತ್ತಿದ್ದರು. ಲೇಪಾಕ್ಷಿಯಲ್ಲಿನ ವರ್ಣಚಿತ್ರಗಳು ಆಗಿನ ಜನರ ಉಡುಗೆ. ಆಭರಣಗಳ ಕಲ್ಪನೆ ನೀಡುತ್ತದೆ.

**ಆರ್ಥಿಕ ಸ್ಥಿತಿಗತಿ :** ಕೃಷಿಯೇ ಜನಜೀವನದ ಮುಖ್ಯ ಆಧಾರ. ಅಕ್ಕಿ, ಗೋಧಿ, ಹತ್ತಿ, ದ್ವಿದಳಧಾನ್ಯ, ಜೋಳ ಮುಂತಾದ ಬೆಳೆಗಳನ್ನು ಹೊಲಗಳಲ್ಲಿ ಬೆಳೆಸುತ್ತಿದ್ದರು. ಪ್ರವಾಸಿಕರು ಈ ಬಗ್ಗೆ ವಿವರ ವರ್ಣನೆ ನೀಡಿದ್ದಾರೆ. ತೆಂಗು, ಅಡಿಕೆಗಳನ್ನು ಬೆಳೆಯಲಾಗುತ್ತಿತ್ತು. ನೀರಾವರಿಗೂ ಸಾಕಷ್ಟು ಗಮನ ಕೊಡಲಾಗಿತ್ತು. "ರಾಜ್ಯವು ತಟಾಕ ಮತ್ತು ಕಾಲುವೆಗಳನ್ನು ಕಟ್ಟಿಸಿ ಸಾಕಷ್ಟು ನೀರಾವರಿಯ ಅನುಕೂಲಗಳನ್ನು ಮಾಡಿಕೊಡಬೇಕು" ಎಂದು ಕೃಷ್ಣದೇವರಾಯ "ಆಮುಕ್ತ ಮಾಲ್ಯ"ದಲ್ಲಿ ತಿಳಿಸಿದ್ದಾನೆ. ತುಂಗಭದ್ರಾ ನದಿಗೆ ಒಡ್ಡು ಕಟ್ಟಿ ರಾಜಧಾನಿಗೆ ಕುಡಿಯುವ ನೀರನ್ನೂ ನಗರದ

ಸುತ್ತಲ ಹೊಲಗಳಿಗೆ ನೀರಾವರಿ ವ್ಯವಸ್ಥೆಯನ್ನೂ ಮಾಡಲಾಗಿತ್ತು. ಆ ಕಾಲದ ಕಾಲುವೆಗಳೂ ಕೊಳವೆ ವ್ಯವಸ್ಥೆಗಳೂ ಹಂಪೆಯಲ್ಲಿ ಇಂದಿಗೂ ಇವೆ "ಬುಕ್ಕ ಸಮುದ್ರ", "ವ್ಯಾಸರಾಯ ಸಮುದ್ರ" ಮುಂತಾದವು ಆ ಕಾಲದಲ್ಲಿ ನಿರ್ಮಾಣ ವಾದ ಜಲಾಶಯಗಳು. ಹಂಪೆಯ ಸುತ್ತ ಅನೇಕ ಕೆರೆಗಳು ಕಾಣಬರುತ್ತವೆ. ಪೆನುಕೊಂಡ ನಗರಕ್ಕೆ ನೀರಾವರಿಯಿಂದ ನೀರೊದಗಿಸಿದ 'ಜಲಸೂತ್ರಧಾರಿ' ಸಿಂಗಾಯ ಭಟ್ಟನೆಂಬ ತಂತ್ರಜ್ಞಾನ ಉಲ್ಲೇಖ ಶಾಸನದಲ್ಲಿದೆ. ಹರಿಹರದ ಬಳಿ ಹರಿದ್ರಾ ನದಿಗೆ ಆಣೆಕಟ್ಟು ಕಟ್ಟಲಾಗಿತ್ತು. ಮುಡುಕುತೊರೆ ಬಳಿ ಕಾವೇರಿಗೆ ಕಟ್ಟಿದ ಮಾಧವ ಮಂತ್ರಿ ಆಣೆಕಟ್ಟು ಪ್ರಖ್ಯಾತವಾಗಿದೆ.

ಹತ್ತಿ ಬಟ್ಟೆಯ ನೇಯ್ಗೆ, ಬಡಿಗೆ ಕೆಲಸ, ಕರಾವಳಿ ಪ್ರದೇಶದಲ್ಲಿ ನಾರಿನ ವ್ಯವಸಾಯ ಇವು ಪ್ರಮುಖ ಕೈಗಾರಿಕೆಗಳು. ಸುಣ್ಣ, ಉಪ್ಪು, ಬೆಲ್ಲ, ಸಕ್ಕರೆ ಗಳನ್ನೂ ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತಿತ್ತು. ಆದರೆ ಈಗಿನಂತೆ ಭಾರಿ ಪ್ರಮಾಣದ ಸಂಘಟಿತ ಕೈಗಾರಿಕೆಗಳಿರಲಿಲ್ಲ. ನೇಯ್ಗೆ ವ್ಯವಸಾಯವು ಅನೇಕ ಸ್ಥಳಗಳಲ್ಲಿ ಕೇಂದ್ರೀಕೃತವಾಗಿತ್ತು. ಬ್ರಾಹ್ಮಣರ ವಿನಾ ಎಲ್ಲ ಜಾತಿಯ ಹೆಂಗಸರು ಬಿಡುವಿನ ವೇಳೆಯಲ್ಲಿ ಚರಕದಲ್ಲಿ ನೂಲುತ್ತಿದ್ದರು.

ಸಾಮ್ರಾಜ್ಯದ ವಿವಿಧ ಕೇಂದ್ರಗಳನ್ನು ಜೋಡಿಸುವ ಒಳ್ಳೆಯ ರಸ್ತೆಗಳು ಇದ್ದುವು. ಭಟ್ಕಳ, ಬಂಕಾಪುರ ಮಾರ್ಗವಾಗಿ ಹಂಪೆಗೆ ಹೋಗುವ ಒಂದು ಹೆದ್ದಾರಿಯನ್ನು ವಿದೇಶೀಯ ಪ್ರವಾಸಿಕರು ವರ್ಣಿಸಿದ್ದಾರೆ. ನದಿಗಳಿಗೆ ಸೇತುವೆ ಗಳನ್ನು ಕಟ್ಟಲಾಗುತ್ತಿತ್ತು. ಆನೆಗುಂದಿ ಮತ್ತು ಹಂಪೆಗಳನ್ನು ಜೋಡಿಸುವ, ತುಂಗಭದ್ರೆಗೆ ಅಡ್ಡಲಾಗಿರುವ ಆ ಕಾಲದಲ್ಲಿ ಸೇತುವೆಯೊಂದರ ಅವಶೇಷ ಇಂದಿಗೂ ಇದೆ.

ಹೇರನ್ನು ಸಾಗಿಸಲು ಕತ್ತೆ, ಎತ್ತು ಹಾಗೂ ಗಾಡಿಗಳನ್ನು ಬಳಸು ತ್ತಿದ್ದರು. ಅನುಕೂಲವಂತರು ಪಲ್ಲಕ್ಕಿಗಳಲ್ಲಿ ಪ್ರಯಾಣ ಮಾಡುತ್ತಿದ್ದರು. ಕುದುರೆಗಳು ವೇಗದ ಪ್ರಯಾಣದ ಸಾಧನಗಳು.

ಕಾಲುವೆ, ನದಿಗಳನ್ನೂ ಸಾರಿಗೆಗೆ ಬಳಸಲಾಗುತ್ತಿತ್ತು. ಹರಿಗೋಲು, ದೋಣಿಗಳ ಬಳಕೆ ಇತ್ತು.

ಸಾಮ್ರಾಜ್ಯದಲ್ಲಿ ಪ್ರಮುಖ ಪಟ್ಟಣಗಳು ವ್ಯಾಪಾರ ಕೇಂದ್ರಗಳೂ ಆಗಿದ್ದವು ; 14ನೆಯ ಶತಕದ ಕೊನೆಯ ಒಂದು ಶಾಸನ ಇಂಥ 26 ಕೇಂದ್ರಗಳನ್ನು ಹೆಸರಿಸುತ್ತದೆ.

ಸಾಮ್ರಾಜ್ಯವು ಸಮೃದ್ಧ ವಿದೇಶ ವಾಣಿಜ್ಯವನ್ನು ಹೊಂದಿತ್ತು. ಸಾಮ್ರಾಜ್ಯದಲ್ಲಿ 300 ಬಂದರುಗಳಿವೆಯೆಂದು ರಜಾಕ್ ತಿಳಿಸುತ್ತಾನೆ. ಮಲಯ, ಬರ್ಮ, ಚೀನ, ಅರೇಬಿಯ, ಪರ್ಶಿಯ, ಆಫ್ರಿಕ, ಯೂರೋಪ್, ಅಬಿಸೀನಿಯಗಳ ಜೊತೆ ಸಾಮ್ರಾಜ್ಯ ವ್ಯಾಪಾರ ನಡೆಸುತ್ತದೆಂದು ಅವನ ಹೇಳುತ್ತಾನೆ. ಕಾಳುಮೆಣಸು, ಏಲಕ್ಕಿ, ಜಾಯಿಕಾಯಿ ಮುಂತಾದ ಮಸಾಲೆ ವಸ್ತುಗಳು, ಕಬ್ಬಿಣದ ಅದುರು, ಸುಣ್ಣದ ಕಲ್ಲು, ತೆಂಗಿನ ನಾರಿನ ವಸ್ತುಗಳು, ತೆಂಗಿನಕಾಯಿ, ಅಡಿಕೆ, ಬೆಲ್ಲ, ತಾಳೆಬೆಲ್ಲ, ಮರದ ದಿಮ್ಮಿ, ಅಕ್ಕಿ, ಹತ್ತಿ ಬಟ್ಟೆಗಳನ್ನು ರಫ್ತು ಮಾಡಲಾಗುತ್ತಿತ್ತು. ಕುದುರೆಗಳು, ಶಸ್ತ್ರಾಸ್ತ್ರಗಳು, ರೇಷ್ಮೆ, ತಾಮ್ರ, ಹವಳ, ಪಾದರಸಗಳನ್ನು ಆಮದು ಮಾಡಲಾಗುತ್ತಿತ್ತು. ಪರ್ಶಿಯದ ಕುದುರೆಗಳಿಗೆ ಸಾಮ್ರಾಜ್ಯದಲ್ಲಿ ತುಂಬಾ ಬೇಡಿಕೆಯಿತ್ತು. ವ್ಯಾಪಾರದಿಂದ ದೇಶವು ಅಪಾರ ಹೊನ್ನನ್ನು ಪಡೆಯುತ್ತಿತ್ತು. ರಫ್ತು ಆಮದಿಗಿಂತ ಹೆಚ್ಚಾಗಿತ್ತು.

ರಾಜಧಾನಿ ವಿಜಯನಗರವು ಭಾರಿ ವ್ಯಾಪಾರ ಕೇಂದ್ರವಾಗಿತ್ತು. ವಿದೇಶಿಯ ಪ್ರವಾಸಿಕರ ವರ್ಣನೆಯನ್ನು ನಂಬುವುದಾದರೆ, ಅದರ ಜನಸಂಖ್ಯೆ 5 ರಿಂದ 10 ಲಕ್ಷದವರೆಗೆ ಇದ್ದಿರಬೇಕು. ಸಮಕಾಲೀನ ವಿಶ್ವದ ಅತ್ಯಂತ ಹಿರಿಯ ನಗರಗಳಲ್ಲಿ ಅದು ಒಂದಾಗಿತ್ತೆಂಬ ಬಗ್ಗೆ ಶಂಕೆಯೇ ಇಲ್ಲ. "ಇದರಂಥ ಇನ್ನೊಂದನ್ನು ಕಣ್ಣು ನೋಡಿಲ್ಲ. ಕರ್ಣಪಟಲ ಆಲಿಸಿಲ್ಲ" ಎಂದು ರಜಾಕ್ ಹೇಳುತ್ತಾನೆ. "ಈ ನಗರದಲ್ಲಿ ಪ್ರತಿ ರಾಷ್ಟ್ರ ಮತ್ತು ಜನಾಂಗಕ್ಕೆ ಸೇರಿದ ಜನ ನಿಮಗೆ ನೋಡಸಿಗುತ್ತಾರೆ. ಅದರ ಭಾರಿ ವಾಣಿಜ್ಯ ಮತ್ತು ಅಲ್ಲಿರುವ ಬಹಳ ರತ್ನಗಳು, ಮುಖ್ಯವಾಗಿ ವಜ್ರಗಳ ವ್ಯಾಪಾರ ಇದಕ್ಕೆ ಮುಖ್ಯ ಕಾರಣ" ಎಂದು ಪಾಯೆಸ್ ತಿಳಿಸುತ್ತಾನೆ. ರತ್ನಾದಿಗಳನ್ನು ಬೀದಿಯಂಚಿನ ಅಂಗಡಿಗಳಲ್ಲಿ ರಾಶಿ ಹಾಕಿಕೊಂಡು ವಣಿಕರು ಕುಳಿತಿರುತ್ತಾರೆಂದು ವರ್ಣನೆಗಳಿವೆ.

**ನಾಣ್ಯಗಳು :** ವರಹ ಲಾಂಛನದ ಸುಮಾರು 52 ಗ್ರೇನ್‌ಗೂ ಹೆಚ್ಚು ತೂಗುವ 'ವರಾಹ' ಅಥವಾ ಗದ್ಯಾಣ' ಅಥವಾ 'ಹೊನ್ನು' ವಿಜಯನಗರದ

ಪ್ರಚಲಿತ ನಾಣ್ಯ. ಹನುಮಂತ, ಗರುಡ, ಆನೆ, ಉಮಾಮಹೇಶ್ವರ, ನಂದಿ, ಶಂಖ, ಚಕ್ರ ಮುಂತಾದ ಚಿಹ್ನೆಗಳೂ ನಾಣ್ಯಗಳಲ್ಲಿ ನಾಗರಿ, ಕನ್ನಡ ಬರಹಗಳು ನಾಣ್ಯಗಳ ಮೇಲಿವೆ.

ಅರ್ಧವರಹವೂ ಬಂಗಾರದ ನಾಣ್ಯವಾಗಿದ್ದು 'ಪ್ರತಾಪ' ಎಂದು ಪರಿಚಿತವಾಗಿದೆ.

'ಪಣ' ಅಥವಾ 'ಹಣ' ಎಂಬ ನಾಣ್ಯವು ರೂಢಿಯಲ್ಲಿದ್ದು ಅದರ ಬೆಲೆ ವರಾಹದ ಹತ್ತನೆಯ ಒಂದು ಭಾಗ.

ಕಾರು, ಕಾಸು ಎಂಬ ತಾಮ್ರದ ನಾಣ್ಯಗಳೂ ರೂಢಿಯಲ್ಲಿದ್ದುವು. ಆದರೆ ಹೆಚ್ಚಾಗಿ ಬಂಗಾರದ ನಾಣ್ಯಗಳೇ ಇಂದಿಗೂ ನೋಡಲು ಸಿಗುತ್ತವೆ. ಮೈಸೂರು, ಕೆಳದಿ, ಚಿತ್ರದುರ್ಗಗಳ ಮುಂದಣ ನಾಣ್ಯಗಳು ವಿಜಯನಗರದ ನಾಣ್ಯಗಳನ್ನೇ ಅನುಕರಿಸಿವೆ.



## ೭. ಸಾಂಸ್ಕೃತಿಕ ಚಟುವಟಿಕೆ

**ಶಿಲ್ಪ :** ದಕ್ಷಿಣ ಭಾರತದ ಸಂಸ್ಕೃತಿಯನ್ನು ಪ್ರತಿನಿಧೀಕರಿಸುವ ಕಲೆ, ಶಿಲ್ಪ, ನೃತ್ಯ, ಸಂಗೀತಗಳು ವಿಜಯನಗರದ ಕಾಲದಲ್ಲಿ ವಿಕಸಿತವಾದವು.

ಸಾಮ್ರಾಜ್ಯದ ಆಶ್ರಯದಲ್ಲಿ ಅನೇಕ ದೇವಾಲಯಗಳೂ ಕಟ್ಟಡಗಳೂ ರಚಿತವಾದವು. ಪ್ರಾಚೀನ ದೇವಾಲಯಗಳಿಗೆ ಉನ್ನತ ಗೋಪುರವನ್ನು ಹೊಂದಿರುವ ಪ್ರವೇಶ ದ್ವಾರವನ್ನೂ ವಿಶಾಲವಾದ ಕಲ್ಯಾಣ ಮಂಟಪ, ವಸಂತ ಮಂಟಪಗಳನ್ನೂ ಸಾಮ್ರಾಟರು ಸೇರಿಸಿದರು ದಕ್ಷಿಣ ಭಾರತದ ಎಲ್ಲ ಹಳೆಯ ದೇವಾಲಯಗಳಲ್ಲೂ 'ರಾಯಗೋಪುರ' ಎಂದು ಪರಿಚಿತವಾಗಿರುವ ಗೋಪುರಗಳು ವಿಜಯನಗರದ ರಚನೆಗಳೇ.

ವಿಜಯನಗರದ್ದೇ ಆದ ಒಂದು ವಿಶಿಷ್ಟ ವಾಸ್ತು ಶಿಲ್ಪದ ಶೈಲಿ ಬೆಳೆಯಿತು. ಹೊಯ್ಸಳರು ಬಳಸಿದ ಮೃದುಶಿಲೆಯನ್ನು ಬಳಸಿದರೆ, ವಿಜಯನಗರದ ಕಾಲದಲ್ಲಿ ಗಟ್ಟಿಯಾದ ಕಗ್ಗಲ್ಲನ್ನೇ ಬಳಸಲಾರಂಭಿಸಿದರು. ವಿಜಯನಗರದ ದೇಗುಲಗಳು ಛಾವಣಿ (ಮಾದು)ಯವರೆಗೆ ಶಿಲೆಯವಾಗಿದ್ದು ಅವುಗಳ ಅಪರಭಾಗವು ಮರದ ಮೋಪು, ಇಟ್ಟಿಗೆ, ಗಚ್ಚುಗಳಿಂದಾಗಿರುತ್ತಿತ್ತು.

ವಿಜಯನಗರವು ಹಿಂದಣ ರಾಜವಂಶಗಳ ಶೈಲಿಯಿಂದ ಅನೇಕ ಅಂಶಗಳನ್ನು ಎರವಲು ಪಡೆಯಿತು. ಚಾಳುಕ್ಯ–ಹೊಯ್ಸಳ ದೇವಾಲಯಗಳ ಉನ್ನತ ತಳಪಾಯ, ಚಾಳುಕ್ಯರ ದೇವಾಲಯಗಳ ಛಾವಣಿಯ ಮೇಲಣ ಗೋಪುರ ಮಾಡಗಳು(ದೇವಕೋಷ್ಠ),ಚೋಳ, ಪಾಂಡ್ಯರ ಕಾಲದ ಪಿರಮಿಡ್ ನಂಥ ಗೋಪುರಗಳು ಹಾಗೂ ವಿಶಾಲ ಸಭಾಭವನಗಳನ್ನು ವಿಜಯನಗರದ ವಾಸ್ತುವಿನಲ್ಲಿ ಬಳಸಿಕೊಳ್ಳಲಾಯಿತು.

ಹಂಪೆಯ ವಿರೂಪಾಕ್ಷ ಮಂದಿರಕ್ಕೆ ಒಂದು ವಿಶಾಲ ಕಲ್ಯಾಣ ಮಂಟಪವನ್ನು ಕೃಷ್ಣದೇವರಾಯ ಜೋಡಿಸಿದ. ಬೇಲೂರಿನ ಚೆನ್ನಕೇಶವ ದೇವಾಲಯದ

ಪ್ರವೇಶ ದ್ವಾರವೂ ವಿಜಯನಗರದ ರಚನೆ. ರಾಜಧಾನಿಯಲ್ಲಿನ ವಿಜಯ ವಿಠಲ, ಕೃಷ್ಣಸ್ವಾಮಿ ಮತ್ತು ಹಜಾರ ರಾಮಸ್ವಾಮಿ ಮಂದಿರಗಳು. ರಾಮೇಶ್ವರದ ಸಾವಿರ ಕಂಬದ ಮಂಟಪವೂ ಕಾಳಹಸ್ತಿ, ಶ್ರೀಶೈಲಂಗಳ ಮಂಟಪ, ಪ್ರಾಕಾರಗಳೂ ಲೇಪಾಕ್ಷಿ, ತಾಡಪತ್ರಿಯ ದೇವಾಲಯಗಳು, ಕಂಚಿಯ ಕಾಮಾಕ್ಷಿ ದೇಗುಲ, ತೆರಕಣಾಂಬಿ ಬಳಿಯ ತ್ರಯಂಬಕಪುರದ ವಿಶಾಲ ದೇಗುಲ ಇದೇ ಕಾಲದ ರಚನೆಗಳು. ಮೂಡಬಿದಿರೆಯ ಸಾವಿರ ಕಂಬದ ಬಸದಿ ಹಾಗೂ ಭಟ್ಕಳದ ಖೇತಪ್ಪಯ್ಯ ನಾರಾಯಣ ದೇವಾಲಯಗಳು ವಿಜಯನಗರದ ಶೈಲಿಯನ್ನು ಚೆನ್ನಾಗಿ ಪ್ರತಿಬಿಂಬಿಸುತ್ತವೆ.

ವಿಜಯನಗರದ ಶೈಲಿಯ ಪ್ರಾತಿನಿಧಿಕ ರಚನೆಯಾದ ಹಜಾರ ರಾಮ ದೇವಾಲಯವನ್ನು ಕೊಂಚ ಪರಿಶೀಲಿಸಬಹುದು. ಈ ದೇವಾಲಯದ ಗರ್ಭಗೃಹದ ಎಡಗಡೆ ಸ್ತ್ರೀದೇವತೆಗಾಗಿ ಪ್ರತ್ಯೇಕ ಗರ್ಭಗೃಹವಿದೆ. ಇದು ಚೋಳರ "ಅಮ್ಮನ ಗುಡಿ"ಯ ಅನುಕರಣೆ. ಗರ್ಭಗೃಹಗಳ ಮೇಲೆ ಪುಟ್ಟ ದ್ರಾವಿಡ ವಿಮಾನ [ಗೋಪುರ]ಗಳಿವೆ. ಈ ದೇವಾಲಯಕ್ಕೆ ಒಂದು ನವರಂಗ, ಒಂದು ಕಲ್ಯಾಣ ಮಂಟಪ ಮತ್ತು ವಿಶಾಲ ಪ್ರಕಾರ, ಇವುಗಳಿವೆ. ಪ್ರಕಾರದ ಹೊರಭಾಗದಲ್ಲಿ ಆನೆಗಳ, ಅಶ್ವದಳದ, ಕಾಲ್ಬಲದ ಹಾಗೂ ನರ್ತಕಿಯರ ಉಬ್ಬು ಶಿಲ್ಪಗಳಿವೆ.

ಕಲ್ಯಾಣಮಂಟಪ ಅಥವಾ ವಸಂತಮಂಟಪಗಳು ಚೌಕಾಕಾರದ ಅಥವಾ ಬಹುಕೋನಾಕಾರದ ಎತ್ತರದ ಪಾಯದ ಮೇಲೆ ನಿಂತ ರಚನೆಗಳಾಗಿದ್ದು ದೇವಾಲಯದ ಮುಂಭಾಗದಲ್ಲಿ ಅಥವಾ ಪ್ರಾಕಾರದ ಒಂದು ಮೂಲೆಯಲ್ಲಿ ಇರುತ್ತವೆ. ಮಂಟಪಗಳ ನಾಲ್ಕು ದೆಸೆಗಳಲ್ಲಿ ಅಗಲ ಕಿರಿದಾದ ಮೆಟ್ಟಿಲ ಸರಣಿಯಿದೆ. ಈ ಮೆಟ್ಟಲುಗಳ ಪಕ್ಕಗಳಲ್ಲಿ ಆನೆ ಅಥವಾ ಮಕರಗಳ ತಾಳವಾರದ ರಕ್ಷಯಿದೆ. ಈ ಮಂಟಪಗಳಲ್ಲಿ ಅಲಂಕೃತ ಸ್ಥಂಭಗಳಿವೆ. "ವಾಸ್ತವವಾಗಿ, ವೈವಿಧ್ಯಮಯವಾದ ಮತ್ತು ಜಟಿಲವಾದ ಸ್ತಂಭಗಳ ರಚನೆಯೇ ವಿಜಯನಗರದ ಶೈಲಿಯ ಎದ್ದು ಕಾಣುವ ಲಕ್ಷಣ"ಎಂದು ಪ್ರೊ. ನೀಲಕಂಠ ಶಾಸ್ತ್ರಿ ಹೇಳಿದ್ದಾರೆ. ಸುಮಾರು 20-30 ಚದರ ಅಡಿ ಅಡ್ಡ ಕೊಯ್ತಾದ

ಭಾರಿ ಗಾತ್ರದ ಬಂಡೆಗಳನ್ನು ಕೊರೆದು ಈ ಸ್ತಂಭಗಳನ್ನು ಮಾಡಲಾಗಿದೆ. ಈ ಬಂಡೆಗಳನ್ನು ಎಲ್ಲ ಕಡೆಗಳಿಂದ ಪೊಳ್ಳು ಮಾಡಿದಾಗ ಸ್ತಂಭದ ಕಾಂಡವು ಕೇಂದ್ರಭಾಗವಾಗುತ್ತದೆ. ಇವುಗಳ ಒಂದು ಮಗ್ಗುಲಲ್ಲಿ ಹಾರುತ್ತಿರುವ ಕುದುರೆ ಅಥವಾ 'ಹಿಪಾಗ್ರಿಫ್'ಗಳಿವೆ. ಅವು ಹಿಂಗಾಲ ಮೇಲೆ ನಿಂತಿದ್ದು ಮುಂಗಾಲನ್ನು ಎತ್ತಿರುತ್ತವೆ. ಇವು ಪಾಂಡ್ಯ ಶೈಲಿಯಿಂದ ಎರವಲು ಪಡೆದು ಸುಧಾರಿಸಿದ ರಚನೆಗಳು. ಎಂಟು, ಒಂಬತ್ತು ಅಡಿ ಎತ್ತರದ ಸತ್ವಯುಕ್ತ ಶೈಲಿಯ ಈ ಪ್ರಾಣಿಗಳು, "ಗಡಸು ಉಕ್ಕಿನ" ರಚನೆಗಳಂತಿವೆಯೆಂದು ವರ್ಣಿತವಾಗಿವೆ ಕಂಬದ ಉಳಿದ ಮಗ್ಗುಲಲ್ಲಿ ವೈವಿಧ್ಯಪೂರ್ಣ ಶಿಲ್ಪವಿದೆ.

ವಿಜಯನಗರದ ಇನ್ನೊಂದು ರೀತಿಯ ಸ್ತಂಭಗಳಲ್ಲಿ ಕೇಂದ್ರ ಘನ ಕಾಂಡದ ಸುತ್ತಲೂ ಕಿರಿದಾದ ಸ್ತಂಭಿಕೆಗಳ ಒಂದು ಸಾಲೇ ಇದೆ. ಈ ಸ್ತಂಭಿಕೆಗಳನ್ನು ಬಡಿದಾಗ ಕೆಲವೊಮ್ಮೆ ಸಪ್ತಸ್ವರಗಳು ಹೊರಡುತ್ತವೆ.

ಮಂಟಪದ ಛಾವಣಿಯು ಒಳಮೈ ಬೋಳಾಗಿರುತ್ತದೆ. ಕೆಲವು ಕೇಂದ್ರ ಸ್ಥಳಗಳಲ್ಲಿ ಮಾತ್ರ ಚಪ್ಪಟೆಯಾದ, ಅರಳಿದ ಕಮಲದ ಉಬ್ಬುಶಿಲ್ಪ ಇರುತ್ತದೆ. ಬಹುಶಃ ವರ್ಣಚಿತ್ರಗಳನ್ನು ಬರೆಯಲೆಂದು ಛಾವಣಿಯನ್ನು ಈ ರೀತಿ ಬೋಳಾಗಿ ಬಿಡಲಾಗಿದೆ. ವಿರೂಪಾಕ್ಷ ದೇವಾಲಯ, ಲೇಪಾಕ್ಷಿ ದೇವಾಲಯ ಕಾಂಚಿಯ ವರ್ಧಮಾನಕೋಯಿಲ್ ಎಂಬ ಬಸದಿಗಳ ಇಂಥ ಛಾವಣಿಯಲ್ಲಿ ಚಿತ್ರಗಳಿವೆ

ಈ ಮಂಟಪಗಳು ಗೋಡೆಗಳಿಲ್ಲದ ತೆರೆದ ರಚನೆಗಳಾಗಿದು, ಈ ಮಂಟಪಗಳ ಮೇಲ್ಗಡೆ, ಅಂಚುಗಳಲ್ಲಿ ಇಟ್ಟಿಗೆ, ಗಾರೆಗಳ ಗೋಪುರಾಕಾರದ ಕಿರಿಯ ದೇವಕೋಷ್ಟಗಳಿವೆ.

ವಿಜಯನಗರ ಹಾಗೂ ಚಂದ್ರಗಿರಿಯಲ್ಲಿರುವ ಕೆಲವು ಲೌಕಿಕ (ಧಾರ್ಮಿಕವಲ್ಲದ) ಕಟ್ಟಡಗಳಲ್ಲಿ ಮುಸ್ಲಿಂ ವಾಸ್ತುಶಿಲ್ಪದ ಪ್ರಭಾವ ಕಾಣಬರುತ್ತದೆ. ಇಟ್ಟಿಗೆ, ಗಾರೆಗಳ ಈ ರಚನೆಗಳು ಮುಸ್ಲಿಂ ಕಮಾನು ಮತ್ತು ಗುಮಟಗಳನ್ನು ಹೊಂದಿವೆ. ಕಮಲ ಮಹಲ್, ಗಜಶಾಲೆ ಮುಂತಾದುವೇ ಇಂಥ ಕಟ್ಟಡಗಳು.

**ಮೂರ್ತಿ ಶಿಲ್ಪಚಿತ್ರ ಕಲೆ:** "ವಿಜಯನಗರದ ಕಾಲದಲ್ಲಿ ದಕ್ಷಿಣ ಭಾರತದ ಕಲೆಯು ಶ್ರೀಮಂತ ಅಭಿವ್ಯಕ್ತಿಯ ಪರಿಪೂರ್ಣತೆ ಮತ್ತು ಸ್ವಚ್ಛಂದತೆಗಳನ್ನು ಕಂಡಿತು. ಇಂಥ ಅಭಿವ್ಯಕ್ತಿಯು ಸಾಮ್ರಾಜ್ಯದ ಘನಧ್ಯೇಯದ ಸಾಮಾನ್ಯ ಪ್ರಜ್ಞೆಗನುಗುಣವಾಗಿತ್ತು. ಇಸ್ಲಾಂನ ಆಕ್ರಮಣದ ವಿರುದ್ಧ ಹಿಂದೂ ಧರ್ಮದ ಉಳಿದು ಬಂದಂಥ ಅಂಶಗಳ ರಕ್ಷಣೆ ಮತ್ತು ಪ್ರಗತಿಯೇ ಈ ಘನ ಧ್ಯೇಯ", ಎಂದು ನೀಲಕಂಟಶಾಸ್ತ್ರಿ ವಿಜಯನಗರದ ಕಲೆಯ ವಿಚಾರ ಹೇಳಿದ್ದಾರೆ. ದೇವಾಲಯಗಳ ರಕ್ಷಣೆಗೆ ಘನ ಗೋಪುರಗಳನ್ನು ಕಟ್ಟಿಸಿದ್ದೂ ಗಟುಸು ಶಿಲೆಯನ್ನು ಶಿಲ್ಪದ ಮಾಧ್ಯಮವಾಗಿ ಬಳಸಿದ್ದೂ ಈ ಮಾತನ್ನು ಸಮರ್ಥಿಸುತ್ತವೆ.

ವಿಜಯನಗರದ ಮೂರ್ತಿಶಿಲ್ಪ ಸರಳತೆ ಮತ್ತು ಗಾಂಭೀರ್ಯಗಳಿಗಾಗಿ ಖ್ಯಾತವಾಗಿದೆ ಪ್ರಾಚೀನ ಕರ್ನಾಟಕದ ಶಿಲ್ಪದಲ್ಲಿನ ಸರಳತೆ ಮತ್ತು ಸಿರಿಃದ್ವಿಗ್ನತೆ ವಿಜಯನಗರದ ಶಿಲ್ಪದಲ್ಲಿದೆ.

ವಿಜಯನಗರದ ನರಸಿಂಹನ ಭಾರಿಪ್ರತಿಮೆ, ಗಣೇಶನ (ಕಡಲೆಕಾಳು–ಸಾಸಿವೆಕಾಳು) ಭಾರಿ ಮೂರ್ತಿಗಳು, ವಿಠಲ ಮಂದಿರದ ಕಲ್ಲಿನ ಹಾಗೂ ಲೇಪಾಕ್ಷಿಯ ವೀರಭದ್ರ ದೇವಲಯದಲ್ಲಿನ ಕಂಬಗಳಲ್ಲಿ ಕೊರೆದ ಮೂರ್ತಿಗಳು (ವಾಸ್ತು ಪುರುಷ, ಇತ್ಯಾದಿ) ಆ ಕಾಲದ ಮೂರ್ತಿಶಿಲ್ಪಕ್ಕೆ ಒಳ್ಳೆಯ ಉದಾಹರಣೆಗಳು. ತಿರುಪತಿಯಲ್ಲಿನ ಕೃಷ್ಣದೇವರಾಯ ಹಾಗೂ ಅವನ ಸತಿಯರ ಕಂಚಿನ ವಿಗ್ರಹಗಳು ಕಾಂಶ ಶಿಲ್ಪದ ಕ್ಷೇತ್ರದಲ್ಲಿ ಸಾಮ್ರಾಜ್ಯವು ಪ್ರಾಚೀನ ಪರಂಪರೆಗಳನ್ನು ಮುಂದುವರೆಸಿದ್ದಕ್ಕೆ ಸಾಕ್ಷಿ.

ವರ್ಣಚಿತ್ರವೂ ವಿಜಯನಗರ ಕಾಲದಲ್ಲಿ ಸಾಕಷ್ಟು ಪ್ರಗತಿಸಾಧಿಸಿತ್ತು ಪಾಯೆಸ್ ಹೇಳಿರುವಂತೆ ಅರಮನೆಯ ಗೋಡೆಗಳು ವರ್ಣಚಿತ್ರಗಳಿಂದ ಅಲಂಕೃತವಾಗಿದ್ದವು. ವಿರೂಪಾಕ್ಷ ಮಂದಿರದ ಕಲ್ಯಾಣ ಮಂಟಪದ ಛಾವಣಿಯ ಒಳಭಾಗದಲ್ಲಿ ದಶಾವತಾರ, ಗಿರಿಜಾ ಕಲ್ಯಾಣ, ವಿದ್ಯಾರಣ್ಯ ಮುಂತಾದ ಚಿತ್ರಗಳನ್ನು ಒಳಗೊಂಡಿವೆ. ಲೇಪಾಕ್ಷಿಯ ವೀರಭದ್ರದೇವಾಲಯದಲ್ಲಿನ ನೂರಾರು ವರ್ಣಚಿತ್ರಗಳಿಂದಾಗಿ ಅದು 'ಬಡವರ ಅಜಂತಾ" ಎಂಬುದಾಗಿ

ಕರೆಯಲ್ಪಟ್ಟಿದೆ ಪಾರ್ಶ್ವಭಂಗಿಯ ಮಾನವ ಚಿತ್ರಗಳಲ್ಲಿ ಎರಡೂ ಕಣ್ಣುಗಳನ್ನು ತೋರಿಸುವುದು ಈ ಶೈಲಿಯ ವೈಶಿಷ್ಟ. ಕಪ್ಪು, ಬಿಳಿ, ನೀಲಿ, ಕೆಂಪು, ಹಸರು ಬಣ್ಣಗಳನ್ನು ಇಲ್ಲಿ ಬಳಸಲಾಗಿದೆ. ವಿಜಯನಗರ ಚಿತ್ರಕಲೆ ತಂಜಾವೂರು ಶೈಲಿಯನ್ನು ಅನುಸರಿಸಿತ್ತೆಂದು ವಿಮರ್ಶಕರ ಅಭಿಪ್ರಾಯ.

**ಸಾಹಿತ್ಯ :** ದಕ್ಷಿಣ ಭಾರತದ ಸಂಸ್ಕೃತಿಯ ಸಮನ್ವಯ ಸಾಧಿಸಿದ ವಿಜಯನಗರ ಸಂಸ್ಕೃತ, ಕನ್ನಡ, ತಮಿಳು, ತೆಲಗು, ತೆಲಗು ಭಾಷೆಗಳ ಸಾಹಿತ್ಯದ ವಿಕಾಸಕ್ಕೆ ಸಮಾನಾವಕಾಶ ನೀಡಿತು.

ಕನ್ನಡದಲ್ಲೇ ಶ್ರೇಷ್ಠ ಕವಿಗಳಾದ ಕುಮಾರವ್ಯಾಸ, ಚಾಮರಸ, ರತ್ನಾಕರವರ್ಣಿ ಇವರೆಲ್ಲರೂ ವಿಜಯನಗರದ ಕಾಲದಲ್ಲಿ ಇದ್ದವರು. ಕನ್ನಡ ಭಾಷೆಯಲ್ಲಿ ಅಪಾರ ಕೃತಿಗಳು ರಚನೆಯಾದವು. ಮಂಗರಸನ ವೈದ್ಯಗ್ರಂಥ "ಖಗೇಂದ್ರಮಣಿ ದರ್ಪಣ" ವಿಜಯನಗರದ ಆರಂಭದ ದಿನಗಳ ರಚನೆ. ಬ್ರಾಹ್ಮಣ ಕವಿಗಳಾದ ಕುಮಾರವ್ಯಾಸ, ತಿಮ್ಮಣ್ಣ, ಚಾಟು ವಿಠ್ಠಲನಾಥ, ನರಹರಿ (ಕುಮಾರ ವಾಲ್ಮೀಕಿ) ವಿಜಯನಗರದ ಕಾಲದಲ್ಲಿ ಇದ್ದವರು. ವೀರಶೈವರಾದ ಭೀಮಕವಿ, ಚಾಮರಸ, ಲಕ್ಕಣ, ಜಕ್ಕಣ, ಗುಬ್ಬಿಯ ಮಲ್ಲಣಾರ್ಯ ಇದೇ ಕಾಲದವರು. ವೀರಶೈವ ವಚನಗಳ ಸಂಪಾದನೆಯ ಘನಕಾರ್ಯ ಈ ಕಾಲದಲ್ಲಿ ನಡೆದು, ಎಡೆಯೂರಿನ ತೋಂಟದ ಸಿದ್ಧಲಿಂಗ ಯತಿಗಳು ಈ ಅವಧಿಯಲ್ಲಿ ಬಾಳಿದವರು. ಜೈನಲೇಖಕರಾದ ರತ್ನಾಕರವರ್ಣಿ, ಮಧುರ, ಸಾಳುವ, ಕಲ್ಯಾಣಕೀರ್ತಿ ವಿಜಯನಗರದ ಅವಧಿಯಲ್ಲಿ ಇದ್ದವರು. ನಂಜುಂಡಕವಿಯ "ಕುಮಾರ ರಾಮನ ಸಾಂಗತ್ಯ" ಈ ಕಾಲದ ಒಂದು ಉಲ್ಲೇಖನೀಯ ಕೃತಿ. ಮಾಧ್ವಸಂತರಾದ ವ್ಯಾಸತೀರ್ಥರು, ಪುರಂದರದಾಸರು, ಕನಕದಾಸರು ಹಾಗೂ ವಾದಿರಾಜರು ಈ ಕಾಲದಲ್ಲಿದ್ದ ಕನ್ನಡ ಕವಿಗಳೇ. ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ವಿಜಯನಗರದ ಚಿತ್ರಣವಿದೆ,

ತೆಲುಗು ಭಾಷೆಯಂತೂ ವಿಜಯನಗರದ ಕಾಲದಲ್ಲಿ ಸ್ವರ್ಣಯುಗವನ್ನೇ ಕಂಡಿತು. ನಾಚನ ಸೋಮ, ಶ್ರೀನಾಥರು ಸಂಗಮರಿಂದ ಆಶ್ರಿತರಾದ ಕವಿ

ಗಳು. ಕೃಷ್ಣದೇವನ ಆಸ್ಥಾನದಲ್ಲಿ ತೆಲುಗು ಸಾಹಿತ್ಯದ ಅಷ್ಟದಿಗ್ಗಜರೆಂಬ ಕವಿಗಳಿದ್ದು ಇದೇ ಕಾಲದಲ್ಲಿ ತೆಲುಗು "ಪ್ರಬಂಧ" ಎಂಬ ಕಾವ್ಯವಿಧಾನ ಬೆಳೆಯಿತು. ಅಲ್ಲಸಾನಿ ಪೆದ್ದನ ("ಮನು ಚರಿತಮು" ಲೇಖಕ), ಧೂರ್ಜಟಿ, ತೆನ್ನಾಲಿ ರಾಮ, ನಾಂದಿಡ್ಲ ಅಪ್ಪ, ನಂದಿ ತಿಮ್ಮಣ್ಣ ಈ ಅಷ್ಟದಿಗ್ಗಜರಲ್ಲಿ ಪ್ರಮುಖರು. ಸ್ವತಃ ಕೃಷ್ಣದೇವನೇ "ಆಮುಕ್ತ ಮಾಲ್ಯದ" ಎಂಬ ತೆಲುಗು 'ಪ್ರಬಂಧ' ಬರೆದ ಕವಿ.

ಕೃಷ್ಣದೇವನು ಹರಿದಾಸನೆಂಬ ತಮಿಳು ಕವಿಗೆ ಆಶ್ರಯ ನೀಡಿದ್ದ. "ಇರು ಸಮಯ ವಿಳಕ್ಕಂ" ಈತನ ಕೃತಿ. ಅರುಣಗಿರಿನಾಥನೆಂಬ ತಮಿಳು ಸಂತ "ತಿರುಪ್ಪುಗಳ್"ನಲ್ಲಿ ಪ್ರೌಢದೇವರಾಯನ ಆಳ್ವಿಕೆಯನ್ನು ಉಲ್ಲೇಖಿಸಿದ್ದಾನೆ. ಸ್ವರೂಪಾನಂದ ದೇಶಿಕ ಮತ್ತು ತತ್ತುವರಾಯರು ವಿಜಯನಗರದ ಕಾಲದಲ್ಲಿ ಶೈವ ಸಂತ ತಮಿಳು ಕವಿಗಳು. ಪುಗಳೇಂದಿಯ "ನಳವೆಂಬಾ" ಅಂದಾರಿಯ "ಸಂದರ ಪಾಂಡಿಯಂ", ಕಚ್ಚಿಯಪ್ಪ ಶಿವಾಚಾರ್ಯರ "ಕಂದಪುರಾಣಂ" ವಿಜಯನಗರ ಕಾಲದ ಕೆಲವು ಉಲ್ಲೇಖನೀಯ ತಮಿಳು ರಚನೆಗಳು.

ಹಿಂದೂ ಸಂಸ್ಕೃತಿಯ ಜ್ಞಾನ ಭಂಡಾರವಾದ ಸಂಸ್ಕೃತ ಭಾಷೆಯು ಸಾಮ್ರಾಜ್ಯದಿಂದ ಅಪಾರ ಪ್ರೋತ್ಸಾಹ ಪಡೆಯಿತು. ಬುಕ್ಕ, ಎರಡನೆಯ ಹರಿಹರರು ವೇದಗಳ ಮೇಲೆ ಭಾಷ್ಯ ಬರೆಯುವ ಕಾರ್ಯವನ್ನು ಸಾಯಣ, ವಿದ್ಯಾರಣ್ಯರಿಗೆ ಒಪ್ಪಿಸಿದ್ದರು; ಹಲವಾರು ಸಂಪುಟಗಳ ಈ ಭಾಷ್ಯ ("ವೇದಾರ್ಥ ಪ್ರಕಾಶ") ದಿಂದಾಗಿ, ತುಂಗಭದ್ರೆಯ ತೀರದ ಬ್ರಾಹ್ಮಣರು ವೇದಗಳ ಬಗೆಗೆ ಅಧಿಕೃತವಾಗಿ ಹೇಳಿಕೆ ನೀಡಬಲ್ಲರೆಂಬ ಕೀರ್ತಿ ಅಖಿಲ ಭಾರತದಲ್ಲಿ ಬೆಳೆಯಿತು. ಭಾರತೀಯ ಪರಂಪರೆಯ ಜ್ಞಾನದ ರಕ್ಷಣೆಗಾಗಿ 'ಆಯುರ್ವೇದ ಸುಧಾನಿಧಿ' 'ಯಜ್ಞತಂತ್ರ ಸುಧಾನಿಧಿ' 'ಸುಭಾಷಿತ ಸುಧಾನಿಧಿ' 'ಅಲಂಕಾರ ಸುಧಾನಿಧಿ' 'ಪ್ರಾಯಶ್ಚಿತ್ತ ಸುಧಾನಿಧಿ' ಮುಂತಾದ ಸಂಕಲನ ಗ್ರಂಥಗಳನ್ನು ಸಂಸ್ಕೃತದಲ್ಲಿ ಸಾಯಣರು ಮಾಡಿದರು. ಇಮ್ಮಡಿ ದೇವರಾಯ, ಸಾಳುವ ನರಸಿಂಹ, ಕೃಷ್ಣದೇವರಾಯ, ತಿರುಮಲ ಇವರೆಲ್ಲ ಸಂಸ್ಕೃತ ಲೇಖಕರೇ. ಆರ್ಕಾಟ್ ಜಿಲ್ಲೆಗೆ ಸೇರಿದ ಡಿಂಡಿಮ ಎಂಬ ಒಂದು

ಬ್ರಾಹ್ಮಣ ವಂಶ ಸಂಸ್ಕೃತ ಲೇಖಕರ ಒಂದು ಪರಂಪರೆಯನ್ನೇ ಕೊಟ್ಟಿದೆ. ಈ ವಂಶದ ಒಬ್ಬ ರಾಜನಾಥನು ಸಾಳ್ವ ನರಸಿಂಹನ ಬಗ್ಗೆ "ಸಾಳ್ವಭುದಯಂ" ಎಂಬ ಕೃತಿ ಬರೆದರೆ ಇನ್ನೊಬ್ಬ ರಾಜನಾಥ ಹದಿನಾರನೆಯ ಶತಮಾನದಲ್ಲಿ "ಅಚ್ಯುತಾಭ್ಯುದಯಂ" ಬರೆದ. ವೇದಾಂತ ದೇಶಿಕರ "ಯಾದವಾಭ್ಯುದಯಂ", ತಿರುಮಲಾಂಬೆಯ "ವರದಾಂಬಿಕಾ ಪರಿಣಯಂ", ಗಂಗಾಂಬಿಕೆಯ "ಮಧುರಾವಿಜಯಂ", ವಾದಿರಾಜ ಸ್ವಾಮಿಗಳ "ರುಕ್ಮಿಣೀಶವಿಜಯಂ", ವಿದ್ಯಾರಣ್ಯರ "ಶಂಕರವಿಜಯಂ" ಈ ಕಾಲದ ಕೆಲವು ಉಲ್ಲೇಖನೀಯ ಸಂಸ್ಕೃತ ಕಾವ್ಯಗಳು. ಸಕಲ ದರ್ಶನಗಳ ಪರಿಚಯ ನೀಡುವ ಮಾಧವರ 'ಸರ್ವದರ್ಶನ ಸಂಗ್ರಹ' ಉಲ್ಲೇಖನೀಯ ಗ್ರಂಥ.

ವ್ಯಾಕರಣ, ತತ್ತ್ವಜ್ಞಾನ, ನ್ಯಾಯಶಾಸ್ತ್ರಗಳಿಗೆ ಸಂಬಂಧಿಸಿದ ಅನೇಕ ಸಂಸ್ಕೃತ ಕೃತಿಗಳು ಈ ಕಾಲದಲ್ಲಿ ರಚಿತವಾದವು. ಭಾರತೀಯ ಧರ್ಮಗಳ ಪರಿಚಯ ನೀಡುವ 'ಸರ್ವದರ್ಶನ ಸಂಗ್ರಹ' ಮಾಧವರ ಗಣ್ಯಕೃತಿ.

**ನೃತ್ಯ, ಸಂಗೀತ, ನಾಟಕ :** ವಿಜಯನಗರದ ಕಾಲದಲ್ಲಿ ನೃತ್ಯಕಲೆಗೆ ಸಿಕ್ಕ ಪ್ರೋತ್ಸಾಹ ಅಪಾರವಾದುದು. ಅರಮನೆಯಲ್ಲೂ ದೇವಾಲಯಗಳಲ್ಲೂ ನೃತ್ಯ ಪ್ರದರ್ಶನವಿರುತ್ತಿತ್ತು. ದೇವಾಲಯಗಳಿಗೆ ದೇವದಾಸಿಯರೆಂಬ ನರ್ತಕಿಯರನ್ನು ಒದಗಿಸಲಾಗಿತ್ತು. ನವರಾತ್ರಿಯ ಕಾಲಕ್ಕೆ ದಿನವಿಡೀ ನೂರಾರು ನರ್ತಕಿಯರ ನರ್ತನ ಕಾರ್ಯಕ್ರಮ ರಾಜಧಾನಿಯಲ್ಲಿ ಇತ್ತು. ರಾಜವಂಶದ ಸ್ತ್ರೀಯರು ನರ್ತನವನ್ನು ಅಭ್ಯಾಸ ಮಾಡುತ್ತಿದ್ದರು. ಅರಮನೆಯ ನೃತ್ಯಶಾಲೆಯ ವರ್ಣನೆಯನ್ನು ಪಾಯೆಸ್ ನೀಡಿದ್ದಾನೆ. ವಿಜಯನಗರದ ದೇವಾಲಯಗಳಲ್ಲಿ ನರ್ತಿಸುವ ಹಾಗೂ ಕೋಲಾಟವಾಡುವ ಭಂಗಿಯ ಶಿಲ್ಪಗಳು ಅಪಾರ ಸಂಖ್ಯೆಯಲ್ಲಿವೆ. ನರ್ತಕಿಯರು ಹಾಗೂ ಜಟ್ಟಿಗಳಿಗೆ ಮಾತ್ರ ರಾಜನ ಎದುರು ತಾಂಬೂಲ ಚರ್ವಣ ಮಾಡುವ ಅವಕಾಶವಿತ್ತು.

ಕರ್ನಾಟಕದ ಸಂಗೀತವು ವಿಜಯನಗರದ ಕಾಲದಲ್ಲಿ ವಿಕಸಿತವಾಯಿತು. ವಿದ್ಯಾರಣ್ಯಕೃತವೆನ್ನಲಾದ "ಸಂಗೀತಸಾರ" ಹಾಗೂ ರಾಮಾಮಾತ್ಯನ

ಬರೆದ "ಸ್ವರಮೇಳ ಕಳಾನಿಧಿ" ಈ ಸಂಪ್ರದಾಯದ ಆಧಾರ ಗ್ರಂಥಗಳೆಂದು ಹೇಳಲಾಗಿದೆ. ಪುರಂದರದಾಸರೂ ಇತರ ಮಾಧ್ವ ಸಂತರೂ ಈ ಸಂಪ್ರದಾಯವನ್ನು ಬೆಳೆಸಿದವರು. ಸಂಗೀತದ ಅಧ್ಯಯನಕ್ಕೆ ಆರಂಭದ ಪಾಠಗಳನ್ನು ಪುರಂದರರು ರಚಿಸಿದರು.



ಶಿಲ್ಪ, ಸಂಗೀತ, ಚಿತ್ರಕಲೆ, ನರ್ತನಗಳ ಅಭಿವ್ಯಕ್ತಿಯ ಕೇಂದ್ರಗಳಾಗಿ ಆ ಕಾಲದ ದೇವಾಲಯಗಳು ಲಲಿತಕಲೆಗಳ ಆಶ್ರಯ ಸ್ಥಾನಗಳಾಗಿದ್ದವು. ಇಂಥ ಸೇವೆಗಳಿಗಾಗಿ ಕಲಾವಿದರಿಗೆ ದತ್ತಿಗಳನ್ನು ನೀಡಲಾಗುತ್ತಿತ್ತು.

ನಾಟಕವೂ ಈ ಕಾಲದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿರಬೇಕು. ಈ ಕಾಲದ ಕನ್ನಡ ನಾಟಕಗಳಾವುವೂ ಇಲ್ಲ. ಎರಡನೆಯ ಹರಿಹರನ ನಸ್ಥಾನಿಕ ಭಾಸ್ಕರನು ಬರೆದ "ಉನ್ಮತ್ತ ರಾಘವ" ಎಂಬ ಏಕಾಂಕಿ, ಕೃಷ್ಣದೇವರಾಯನ "ಜಾಂಬವತೀ ಕಲ್ಯಾಣಂ" ಈ ಕಾಲದ ಕೆಲವು ಉಲ್ಲೇಖನೀಯ ಸಂಸ್ಕೃತ ನಾಟಕಗಳು. ಎರಡನೆಯ ನಾಟಕವನ್ನು ಅಭಿನಯಿಸಲಾಗಿತ್ತೆಂಬ ದಾಖಲೆಗಳಿವೆ. ಶಾಸನವೊಂದರಲ್ಲಿ 'ತಾಯ ಕುಂಡ' ನಾಟಕವನ್ನು ಆಡಿದರೆಂಬ ಮಾತಿದೆ. ರತ್ನಾಕರನ "ಭರತೇಶ ವೈಭವ"ದಲ್ಲಿ ನಾಟಕವೊಂದರ ವರ್ಣನೆಯಿದ್ದು ಅದು ಯಕ್ಷಗಾನವನ್ನು ಹೋಲುತ್ತದೆ. "ನಾಟಕ ಸ್ತ್ರೀಯಳಂತೆ ಬಯಲು ಡಂಬರ ತೋರೆ" ಎಂಬ ಪುರಂದರದಾಸರ ಮಾತು ಇಲ್ಲಿ ಉಲ್ಲೇಖನಾರ್ಹ.

ಬೊಂಬೆಯಾಟ, ಇಂದ್ರಜಾಲ, ಮಲ್ಲಯುದ್ಧ ಹಾಗೂ ಅನ್ಯ ಕ್ರೀಡೆಗಳೂ ವಿಜಯನಗರದಲ್ಲಿ ಪ್ರೋತ್ಸಾಹಿತವಾಗಿ ಪ್ರಗತಿ ಸಾಧಿಸಿದ್ದುವೆಂಬ ವಿಚಾರವೂ ಗೊತ್ತಾಗುತ್ತದೆ. ಸ್ತ್ರೀಯರೂ ಮಲ್ಲಯುದ್ಧದಲ್ಲಿ ಭಾಗವಹಿಸುವುದಿತ್ತು. 'ಪಿಪ್ರವಿನೋದಿ'ಗಳೆಂಬ ದೊಂಬರ ವಿಶಿಷ್ಟ ವರ್ಗವಿತ್ತು. ದೊಂಬರ ಆಟ ಕುಸ್ತಿ ಪ್ರದರ್ಶನಗಳು ದಸರೆಯ ಕಾಲಕ್ಕೆ ರಾಜಧಾನಿಯಲ್ಲಿ ನಡೆಯುತ್ತಿತ್ತು. ಜಟ್ಟಿಗಳಿಗೆ ಸಾಮ್ರಾಜ್ಯದಲ್ಲಿ ವಿಶಿಷ್ಟ ಗೌರವವಿತ್ತು.

ಸಾಮ್ರಾಜ್ಯವು ಸಾಧಿಸಿದ್ದ ಶಾಂತಿಯಿಂದ ಬೆಳೆದ ಸಮೃದ್ಧಿ ಇವೆರಡು ಕೂಡ ಮರೆಯಲಾಗದ ಸಾಂಸ್ಕೃತಿಕ ಸಾಧನೆಗೂ ಪ್ರೇರಕವಾಗಿದ್ದವು. ಸಾಮ್ರಾಟರು ಎಲ್ಲ ವಿವಿಧ ಪ್ರತಿಭಾವಶಾಲಿಗಳಿಗೆ ಪ್ರೋತ್ಸಾಹ, ಆಶ್ರಯ ನೀಡುತ್ತಿದ್ದರು. "ವಿಜಯನಗರದ ಇತಿಹಾಸ ಸ್ವತಂತ್ರ ದಕ್ಷಿಣ ಭಾರತದ ಇತಿಹಾಸದಲ್ಲಿ ಕೊನೆಯ ವೈಭವಯುತ ಅಧ್ಯಾಯ" ಎಂದು ಪ್ರೊ. ನೀಲಕಂಠ ಶಾಸ್ತ್ರಿಯವರು ಹೇಳಿದ ಮಾತು ಉಚಿತವಾದುದಾಗಿದೆ.

—0—

# ಪರಿಶಿಷ್ಟ : ವಿಜಯನಗರದ ಪರಿಚಯ

ಹಂಪೆ ಅಥವಾ ಪಂಪಾಕ್ಷೇತ್ರ ಒಂದು ಪ್ರಾಚೀನ ಪುಣ್ಯಕ್ಷೇತ್ರ. ಇತಿಹಾಸ ಪೂರ್ವ ಕಾಲದಲ್ಲಿ ಇಲ್ಲಿ ಜನನಿವಾಸ ಇತ್ತೆಂಬುದು ವಾಲಿದಿಬ್ಬದಲ್ಲಿ ಇರುವ ಬೂದಿ ರಾಶಿ ಹಾಗೂ ಸಮೀಪದ ಮುಸಳಯ್ಯನ ಗುಡ್ಡದಲ್ಲಿ ದೊರೆತ ಇತಿಹಾಸ ಪೂರ್ವ ('ಪ್ರಿಹಿಸ್ಟಾರಿಕ್') ಕಾಲದ ನಿವೇಶನದಿಂದ ಖಚಿತವಾಗಿದೆ. ರಾಮಾಯಣ ಕಾಲದ ಕಿಷ್ಕಿಂದೆಯು ಪಂಪಾಕ್ಷೇತ್ರವೆಂಬ ನಂಬಿಕೆಯಿದೆ. ವಶಿಷ್ಠರ ಆಶ್ರಯ ಇಲ್ಲಿ ಇತ್ತೆಂದು ಹರಿಹರ ಕವಿ ಹೇಳಿದ್ದಾನೆ, ಎಂಟನೇಯ ಶತಮಾನದಲ್ಲಿ ಚಾಳುಕ್ಯರ ಶಾಸನದಲ್ಲಿ ಚಾಳುಕ್ಯ ಚಕ್ರವರ್ತಿಯೊಬ್ಬನು ಪಂಪಾಕ್ಷೇತ್ರದಲ್ಲಿ ಬೀಡುಬಿಟ್ಟ ವಿಚಾರವಿದೆ. ಅಲ್ಲದೆ, ಹೇಮಕೂಟ ಪರ್ವತದ ಮೇಲೆ ಬಾದಾಮಿಯ ಚಾಳುಕ್ಯರ ಕಾಲದ ದೇವಾಲಯವೂ ಇದೆ. ಇಕ್ಷ್ವಾಕುಗಳ ಕಾಲದ ಕೆಲವು ಮೂರ್ತಿಗಳೂ ಅವಶೇಷಗಳೂ ಇಲ್ಲಿ ದೊರೆತಿದ್ದು ಇವರು ಕ್ರಿ. ಶ. 3–4ನೇಯ ಶತಕದಲ್ಲಿ ಆಳಿದವರು. ಹಂಪೆಯ ವಿರೂಪಾಕ್ಷ ದೇವಾಲಯದ ಬಗ್ಗೆ ಹತ್ತನೇಯ ಶತಮಾನದ (988) ಶಾಸನಗಳಲ್ಲಿ ಉಲ್ಲೇಖವಿದೆ. ಇದಕ್ಕೂ ಹಿಂದಣದಾಗಿರಬಹುದಾದ ಈ ದೇವಾಲಯವನ್ನು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಪುನರ್ರಚಿಸಿದ್ದು ದೇವಾಲಯದ ಶೈಲಿಯಿಂದ ಸ್ಪಷ್ಟ. 1199ರ ಶಾಸನದಂತೆ ಹಂಪೆಯಲ್ಲಿ ವಿರೂಪಾಕ್ಷ, ಹಂಪಾದೇವಿ. ಭೈರವ, ಬ್ರಹ್ಮೇಶ್ವರ ವಿರೂಪಾಕ್ಷ ಮಂದಿರಗಳಿದ್ದು, ವಿರೂಪಾಕ್ಷನ ಹಿಂಭಾಗದಲ್ಲಿ ರಾಜಮಲ್ಲೇಶ್ವರ ಮಂದಿರವಿತ್ತು,

ಹದಿಮೂರನೇಯ ಶತಮಾನದಲ್ಲಿ ಹರಿಹರ ಕವಿಯು ಇಲ್ಲಿ ನೆಲೆಸಿದ್ದು ಅವನು ರಚಿಸಿದ್ದ 'ಪಂಪಾಕ್ಷೇತ್ರ ಮಹಿಮೆ' ರಗಳೆಯಲ್ಲಿ ತಿಳಿಸಿದಂತೆ, ಆಗಲೇ ಹಂಪೆ ವಿಶಾಲಪಟ್ಟಣ. "ವಾರಣಾಸಿಗೆಯುಂ ಮಿಗಿಲಾದ" ಹಾಗೂ "ಶಿವಪುರಗಳೊಳಗೆ ಮಿಗಿಲಾದ" ಪಟ್ಟಣ ಹಂಪೆಯೆಂದು ಹರಿಹರ ಹೇಳಿದ್ದಾನೆ. ಆಗಲೇ

ಹಂಪೆಯಲ್ಲಿ ಒಂದು ಕೋಟೆ ಇತ್ತು. ಮುಂದೆ ಹೊಯ್ಸಳ ಮೂರನೇಯ ಬಲ್ಲಾಳ ರಚಿಸಿದ ಎರಡನೇಯ ರಾಜಧಾನಿ ಹೊಸಪಟ್ಟಣ ಹಂಪೆಯೇ ಎಂದು ಅಭಿಪ್ರಾಯವಿದೆ.

ವಿರೂಪಾಕ್ಷ ಇಲ್ಲಿಯ ಮುಖ್ಯಮಂದಿರ ಇಟ್ಟಿಗೆ, ತಾಳಿತೋಪು ಗಾರೆಗಳಿಂದ ಮಾಡಿದ 170 ಅಡಿ ಎತ್ತರದ 11 ಅಂತಸ್ತುಗಳ ಇದರ ಬಿಷ್ಟಪ್ಪಯ್ಯ ಗೋಪುರವು ವಿಜಯನಗರ ಶೈಲಿಯ ಪ್ರಸಿದ್ಧ 'ರಾಯಗೋಪುರ'ಗಳಲ್ಲಿ ಬಹುಶಃ ಪ್ರಪ್ರಥಮವಾಗಿದ್ದು, ಬಿಷ್ಟಪ್ಪಯ್ಯ ಎಂಬುವನಿಂದ 14ನೇಯ ಶತಮಾನದಲ್ಲೇ ರಚಿತವಾಗಿತ್ತು. ಒಳ ಪ್ರವೇಶ ಮಾಡಿದಾಗ ಸಿಗುವ ವಿಶಾಲ ಕಲ್ಯಾಣ ಮಂಟಪ ಕೃಷ್ಣದೇವರಾಯನ ರಚನೆ. ಇದರ ಒಳ ಚಾವಣಿಯಲ್ಲಿ ರಾಮ ವಿವಾಹ, ದಶವತಾರ, ಮದನದಹನ, ಪಲ್ಲಕ್ಕಿಯಲ್ಲಿ ವಿದ್ಯಾರಣ್ಯರ ಮೆರವಣಿಗೆ, ಮುಂತಾದ ವರ್ಣಚಿತ್ರಗಳಿವೆ. ವಿರೂಪಾಕ್ಷನ ಗರ್ಭಗೃಹದ ಎಡಕ್ಕೆ ಪಂಪಾದೇವಿ, ಭುವನೇಶ್ವರಿ, ಪ್ರಾಕಾರದಲ್ಲಿ ಸಪ್ತಮಾತೃಕೆಯಿತು, ಸರಸ್ವತಿ ಸೂರ್ಯನಾರಾಯಣ, ಮುಕ್ತಿ ನರಸಿಂಹ ಮುಂತಾದ ಗುಡಿಗಳಿವೆ. ಹಿಂಭಾಗದಲ್ಲಿ ವಿದಾರ್ಯಣ್ಯರ ಗುಡಿಯಿದೆ. ಹೇಮಕೂಟ ಪರ್ವತದಲ್ಲಿ ಕದಂಬನಾಗರ ಗೋಪುರವುಳ್ಳ ಶಿವಾಲಯಗಳಿದ್ದು ಆ ಪೈಕಿ ಒಂದು ತ್ರಿಕೂಲ ಮಂದಿರ. ಇವುಗಳಲ್ಲಿ ಒಂದು 1309-10ರ ಕಂಪಿಲ ಸಿಂಗೆಯನ ರಚನೆ. ಚಾಳುಕ್ಯರ ಒಂದು ದೇವಾಲಯವೂ ಇದೆ.

ವಿರೂಪಾಕ್ಷನ ಎದುರು 100 ಅಡಿಗೂ ವಿಶಾಲ ರಾಜಬೀದಿ, ಇಕ್ಕೆಲ್ಲಗಳಲ್ಲಿ ಪ್ರಾಚೀನ ಅಂಗಡಿ, ಮನೆಗಳು, ಕೊನೆಗೆ ಬೃಹತ್ ದಂದಿ, ಅದರ ಮಂಟಪ ಹೇಮಕೂಟದ ದಕ್ಷಿಣಕ್ಕೆ ಸಾಸಿವೆಕಾಳು ಗಣೇಶ (ಎಂಟು ಅಡಿ), ಪೂರ್ವಕ್ಕೆ 15 ಅಡಿಗೂ ಮೀರಿದ ಕಡಲೆಕಾಳು ಗಣಪತಿ. ಕೃಷ್ಣಸ್ವಾಮಿ ಮಂದಿರವನ್ನು ಉದಯಗಿರಿಯಿಂದ ತಂದ ಕೃಷ್ಣಮೂರ್ತಿಗಾಗಿ ಕೃಷ್ಣದೇವರಾಯ ಕಟ್ಟಿಸಿದ. (ಈಗ ಈ ಮೂರ್ತಿ ಮದ್ರಾಸ್ ಮ್ಯೂಜಿಯಂನಲ್ಲಿದೆ) ಈ ದೇವಾಲಯ ಕಡಲೆಕಾಳು ಗಣೇಶನ ದಕ್ಷಿಣಕ್ಕಿದೆ. ಇಲ್ಲಿನ ಸಭಾಮಂಟಪ ಬಲು ಸುಂದರ. ದೇವಾಲಯದ ಬಳಿಯೇ 29 ಅಡಿಯ ಏಕಶಿಲಾ ಲಕ್ಷ್ಮೀ ನರಸಿಂಹ ಕೃಷ್ಣದೇವರಾಯನ ರಚನೆ (ಈಗ ಲಕ್ಷ್ಮೀಮೂರ್ತಿ ಇಲ್ಲ.)

ಹಂಪೆಯ ದೇವಾಲಯಗಳಲ್ಲಿ ಸುಂದರವಾದುವೆಂದು ವಿಠಲ ಮತ್ತು ಹಜಾರ ರಾಮಸ್ವಾಮಿ ; ವಿಠಲಮಂದಿರ[ಶಾಸನದಲ್ಲಿ 'ಕಂನಾಡ ವಿಠಲೇಶ್ವರ']ದ ಕಂಬಗಳಲ್ಲಿ ಸಪ್ತಸ್ವರಗಳನ್ನು ಹೊರಡಿಸಬಹುದು. ಇಲ್ಲಿನ ಏಕಶಿಲಾ ಕಲ್ಲಿನ ರಥವೂ ಒಂದು ಶ್ರೇಷ್ಠ ಕಲಾಕೃತಿ. ಶಾಸನಗಳಲ್ಲಿ 'ರಾಮಚಂದ್ರ'ಎಂದು ಉಲ್ಲೇಖಿತ ಹಜಾರರಾಮ ಮಂದಿರ ಇಮ್ಮಡಿ ದೇವರಾಯನ ರಚನೆ [ಮೂಲವಾಗಿ ಪಂಪಾದೇವಿ ಮಂದಿರ ಎಂದು ಒಂದು ಅಭಿಪ್ರಾಯ]. ಅರಮನೆ [ಹಜಾರ]ಕ್ಕೆ ಸೇರಿದ್ದ 'ಹಜಾರ ರಾಮ' ಗೋಡೆ ಕಂಬಗಳಲ್ಲಿ ರಾಮಾಯಣ ಶಿಲ್ಪಗಳಿವೆ. ಸಮೀಪವೇ ಅರಮನೆ, ಟಂಕಸಾಲೆಗಳ ನೆಲೆಗಟ್ಟು, ಸಿಂಹಾಸನದ ನೆಲೆಗಟ್ಟು ['ಭುವನ ವಿಜಯ'] ಅದರ ಬಳಿ ಪ್ರಾಚೀನ ನೀರು ಸಾಗಣೆಯ ಕಲ್ಲು ಕೊಳವೆಗಳು ಗಜಶಾಲೆ, ಕಮಲಮಹಲ್, ಇವೆಲ್ಲ ಇವೆ.

ಮಾಲ್ಯವಂತ, ರಘುನಾಥ, ಕೋದಂಡರಾಮ, ಅಚ್ಯುತರಾಯ [ಅಚ್ಯುತರಾಯ ಕಟ್ಟಿಸಿದ 'ತಿರುವೆಂಗಳನಾಥ'ಮಂದಿರ] ದೇವಾಲಯಗಳ ಮಾತಂಗ ಪರ್ವತದ ಹಿನ್ನೆಲೆಯಲ್ಲಿವೆ. ಮಹಾನವಮಿ ದಿಬ್ಬದ ಮೇಲಣ ಶಿಲ್ಪಗಳು ಗಮನಾರ್ಹವಾದವು. ಇರುಗಪ್ಪ ದಂಡನಾಯಕ ಕಟ್ಟಿಸಿದ ಕಂತು ಜಿನಾಲಯ ಇಂದು ಗಾಣಗಿತ್ತಿ ಜಿನಾಲಯವೆನಿಸಿದೆ. ದಳವಾಯಿ ಜಂಗಮಯ್ಯ 1546ರಲ್ಲಿ ಕಟ್ಟಿದ ಮದುವೀರಣ್ಣನ ಗುಡಿ ಈಗ "ಉದ್ದಾನ ವೀರಭದ್ರ"ಮಂದಿರವಾಗಿದೆ. ಇತ್ತೀಚೆಗಿನ ಉತ್ಖನನಗಳು ಹಲವಾರು ಕಟ್ಟಡಗಳ ನೆಲಗಟ್ಟುಗಳನ್ನೂ ಒಂದು ಅತ್ಯಂತ ಸುಂದರ ಕಲ್ಯಾಣಿಯನ್ನೂ ಹಲವು ಜಿನಮಂದಿರಗಳನ್ನೂ ಬೆಳಕಿಗೆತಂದಿವೆ. ಹಂಪೆಯ ಈ ಮುಖ್ಯ ಸ್ಮಾರಕಗಳಲ್ಲದೆ, ತುಂಗಾತೀರದ ಪುರಂದರ ಮಂಟಪ, ನದಿಯಾಚೆಗಿನ ಆನೆಗೊಂದಿ, ವರ್ಣಚಿತ್ರರಂಜಿತವಾದ ಅಲ್ಲಿನ ಹುಚ್ಚಪ್ಪಯ್ಯನ ಮಠ, ಹೊಸಪೇಟೆ ಮಾರ್ಗದ ಅನಂತಶಯನ ಗುಡಿ, ಕಮಲಾಪುರದ ವಸ್ತು ಸಂಗ್ರಹಾಲಯ ಪ್ರೇಕ್ಷಣೀಯ ತಾಣಗಳು. ಹಂಪೆಗೂ ಆನೆಗೊಂದಿಗೂ ನಡುವೆ ದ್ವೀಪದಲ್ಲಿ ಮಾಧ್ವ ಸಂನ್ಯಾಸಿಗಳ ನವವೃಂದಾವನಗಳಿವೆ.

—o—

# ಪರಿಶಿಷ್ಟ : ವಂಶವೃಕ್ಷಗಳು

## I ಸಂಗಮ ವಂಶ

ಸಂಗಮ
























## II ಸಾಳುವ ವಂಶ

1. ನರಸಿಂಹ (1485–91)

